ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ - ೨೯

# ಸರ್ವಜ್ಞ ಕವಿ

ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.



ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್
ಮೈಸೂರು
೧೯೪೧

# ಮುನ್ನುಡಿ

ಮೈಸೂರು ವಿಶ್ವವಿದ್ಯಾನಿಲಯದ ಮೊದಲನೆಯ ಚಾನ್ಸಲರವರಾದ ಆಳಿದ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜ ಒಡೆಯರ್ ಬಹದೂರ್ ಅವರು ಮೊದಲನೆಯ ಸೆನೆಟ್ ಸಭೆಯ ಪ್ರಾರಂಭೋತ್ಸವದ ಭಾಷಣದಲ್ಲಿಯೂ, ಪುನಃ ಮೊದಲನೆಯ ಕಾನ್ವೊಕೇಷನ್ ಮಹೋತ್ಸವದ ಭಾಷಣದಲ್ಲಿಯೂ ವಿಶ್ವವಿದ್ಯಾನಿಲಯದ ಪಾಲಿಗೆ ಹಲವು ಕರ್ತವ್ಯಗಳನ್ನು ಅಪ್ಪಣೆಮಾಡಿದರು. ಅವುಗಳಲ್ಲಿ ವಿಶೇಷವಾದವು ಇವೆರಡು: ಒಳ್ಳೆಯ ಕನ್ನಡದಲ್ಲಿ ಬರೆದ ಪುಸ್ತಕಗಳ ಪ್ರಕಟನೆ; ಹಾಗೂ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ. ಮತ್ತು ಶ್ರೀಮನ್ಮಹಾರಾಜರವರ ಪ್ರಜೆಗಳಲ್ಲಿ ಯಾರು ಕಾರಣಾಂತರಗಳಿಂದ ಕ್ರಮಬದ್ಧವಾದ ಶಿಕ್ಷಣ ಶಿಸ್ತುಗಳಲ್ಲಿ ಭಾಗವಹಿಸಿ ಪರೀಕ್ಷೆಗಳಿಗೆ ಕೂಡಲು ಶಕ್ತರಲ್ಲವೋ ಅಂಥವರಲ್ಲಿ ಜ್ಞಾನಪ್ರಸಾರ ಮಾಡುವುದು; ಅಲ್ಲದೆ ಮೈಸೂರು, ಬೆಂಗಳೂರು ಈ ಎರಡು ಹಿರಿಯ ಪಟ್ಟಣಗಳಲ್ಲಿ ದೊರಕುವ ವಿದ್ಯಾಭ್ಯಾಸಾನುಕೂಲ್ಯಗಳನ್ನು ಪಡೆದಿಲ್ಲದ, ಸಂಸ್ಥಾನದ ದೂರ ಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಉಚ್ಚ ವರ್ಗದ ಸಂಸ್ಕೃತಿಯನ್ನು ಹರಡುವುದು.

ವಿಶ್ವವಿದ್ಯಾನಿಲಯವು ಸ್ಥಾಪಿತವಾದಂದಿನಿಂದಲೂ ಈ ಎರಡು ಮುಖ್ಯ ಧ್ಯೇಯಗಳನ್ನು ತನ್ನ ಮುಂದೆ ತಪ್ಪದೆ ನಿಲ್ಲಿಸಿಕೊಂಡಿದೆ. ಅದರ ಕನ್ನಡ ಪ್ರಕಟನ ಶಾಖೆಯು ಕೆಲವು ಪ್ರಸಿದ್ಧ ಹಳಗನ್ನಡ ಕಾವ್ಯಗಳನ್ನು ಎಚ್ಚರಿಕೆಯಿಂದ ಪರಿಷ್ಕರಿಸಿ ಅಚ್ಚು ಹಾಕಿಸಿದೆ; ಅಲ್ಲದೆ, ಸಾಹಿತ್ಯ ವಿಜ್ಞಾನ ವಿಷಯಗಳನ್ನು ಕುರಿತ ಕೆಲವು ಲಘು ಪುಸ್ತಕಗಳನ್ನೂ ಹೊರತಂದಿದೆ. ಪ್ರಚಾರೋಪ

ನ್ಯಾಸ ಸಮಿತಿಯವರು ಸಂಸ್ಥಾನದ ಎಲ್ಲ ಭಾಗಗಳ ಅನೇಕ ಕೇಂದ್ರಗಳಲ್ಲಿ ಹೆಚ್ಚಾಗಿ ಕನ್ನಡದಲ್ಲಿಯೇ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದಾರೆ.

ಇತ್ತೀಚೆಗೆ ಒಂದು ಫಲದಾಯಕವಾದ ಕಾರ್ಯಕ್ರಮ ಬೆಳೆದು ಬರುತ್ತಿದೆ. ವಿಷಯ ಒಂದೊಂದಕ್ಕೆ ಒಂದೊಂದರಂತೆ ಬಿಡಿ ಉಪನ್ಯಾಸವನ್ನು ಕೊಡಿಸುವುದರ ಜೊತೆಗೆ, ವಿಶ್ವವಿದ್ಯಾನಿಲಯದ ಅಧ್ಯಾಪಕಸಂಘದ ಸಹಕಾರದಿಂದ ಸಂಸ್ಕೃತಿ ಸಪ್ತಾಹಗಳೆಂದು ಈಗಾಗಲೇ ಕರೆಯಲ್ಪಡುತ್ತಿರುವ ಉಪನ್ಯಾಸಮಾಲೆಗಳನ್ನು ಇಡಿಸಲಾಗುತ್ತಿದೆ. ಒಂದೇ ಊರಿನಲ್ಲಿ ಐದಾರು ದಿನ ಭಾಷಣ ಕಾವ್ಯವಾಚನ ಸಂಗೀತಾದಿಗಳು ಜರುಗುತ್ತವೆ; ಉಪನ್ಯಾಸಗಳು ಸಾಹಿತ್ಯ ವಿಜ್ಞಾನ ಸಮಾಜವೆಲ್ಲಕ್ಕೂ ಸಂಬಂಧಿಸಿರುತ್ತವೆ. ಈ ಸಪ್ತಾಹಗಳು ನೆರವೇರಿದ ದೊಡ್ಡಬಳ್ಳಾಪುರ, ದಾವಣಗೆರೆ, ಕೋಲಾರ ಮುಂತಾದ ಎಲ್ಲ ಕಡೆಗಳಿಂದಲೂ ಅವಕ್ಕೆ ಬಹಳ ಮನ್ನಣೆ ದೊರೆತಿದೆ.

ಈಗ ಅತಿ ಹೊಸದಾದ ಏರ್ಪಾಡಾವುದೆಂದರೆ: ಒಂದೆರಡು ಊರುಗಳನ್ನು ಆರಿಸಿಕೊಂಡು, ಅಲ್ಲಿಗೆ ಒಂದು ವರ್ಷದಲ್ಲಿ ಹಲವು ಬಾರಿಹೋಗಿ, ಕೆಲವು ವಿಷಯಗಳಲ್ಲಿ ಒಂದೊಂದನ್ನೂ ಕುರಿತು ನಾಲ್ಕಾರು ಉಪನ್ಯಾಸಗಳನ್ನು ಹೇಳುವ ಯೋಜನೆ. ಆದರಿಂದ ಆ ಊರುಗಳ ಜನರಿಗೆ ಅನಲ್ಪಕಾಲ ಎಡೆಬಿಡದೆ ಜ್ಞಾನಬೋಧೆ ಸಿಕ್ಕುವುದು. ಪ್ರತ್ಯಕ್ಷ ಕೇಳಿ ಉಪಯೋಗ ಪಡೆದ ಸಭಿಕರ ಗುಂಪಿನಿಂದ ಆಚೆಗೂ ಕೂಡ ಈ ಭಾಷಣಮಾಲೆಗಳ ಪ್ರಯೋಜನ ಹರಡಲೆಂಬ ಉದ್ದೇಶದಿಂದ ಅವುಗಳನ್ನು ಈ ರೀತಿ ಚಿಕ್ಕ ಹೊತ್ತಗೆಗಳಾಗಿ ಪ್ರಕಟಿಸಿದೆ.

ಆಳಿದ ಘನ ಪ್ರಭುಗಳವರು ನಮ್ಮ ವಿಶ್ವವಿದ್ಯಾನಿಲಯಕ್ಕೆ ಎರಡು ಪವಿತ್ರ ಕರ್ತವ್ಯಗಳನ್ನು ನೇಮಿಸಿದರಷ್ಟೆ: ಸುಲಭ ಸಮಂಜಸ ಕನ್ನಡದಲ್ಲಿ ರಚಿಸಿದ ಗ್ರಂಥಗಳ ಪ್ರಕಟನೆ; ಜನತೆಯಲ್ಲಿ ಉತ್ತಮ ಬಗೆಯ ಸಂಸ್ಕೃತಿಯ ಪ್ರಸಾರ. ಆ ಎರಡು ಕರ್ತವ್ಯಗಳನ್ನೂ ಈ ಮಾರ್ಗವಾಗಿ ಒಂದೇಸಾರಿ ಸಾಧಿಸಬಹುದೆಂಬುದೇ ಹೀಗೆ ಉಪನ್ಯಾಸಗಳನ್ನು ಕೊಟ್ಟು ಲಘು ಪುಸ್ತಕಗಳನ್ನು ಸಿದ್ಧಮಾಡಿದವರ ನಿರೀಕ್ಷೆ ಮತ್ತು ಹೆಬ್ಬಯಕೆ.

ವಿಶ್ವವಿದ್ಯಾನಿಲಯ, ಮೈಸೂರು,
೧೫—೮—೧೯೪೦.

**ಎನ್. ಎಸ್. ಸುಬ್ಬರಾವ್**

# ವಿಷಯಾನುಕ್ರಮಣಿಕೆ

# ಸರ್ವಜ್ಞ ಕವಿ

## ೧. ಪೀಠಿಕೆ

ಕನ್ನಡಸಾಹಿತ್ಯ ಸುಮಾರು ಸಾವಿರದ ಐನೂರು ವರ್ಷಗಳ ಹಿಂದೆ ಆರಂಭವಾಯಿತು. ಆಗ ಗ್ರಂಥಗಳನ್ನು ಹೆಚ್ಚಾಗಿ ಬರೆದವರು ಜೈನರು. ಅವರು ಸಂಸ್ಕೃತ ಪ್ರಾಕೃತಗಳನ್ನು ತಿಳಿದ ಪಂಡಿತರಾಗಿದ್ದು ರಾಜಾಶ್ರಯದಲ್ಲಿ ಕಾವ್ಯರಚನೆಮಾಡಿದರು. ರಾಜನ ಮೆಚ್ಚಿಕೆಗಾಗಿಯೂ ರಾಜಾಸ್ಥಾನದಲ್ಲಿದ್ದ ವಿದ್ವಾಂಸರ ಒಪ್ಪಿಕೆಗಾಗಿಯೂ, ಬರೆದವುಗಳಾದ್ದರಿಂದ ಅವು ಪ್ರೌಢವಾಗಿಯೂ ಪಾಂಡಿತ್ಯದಿಂದ ಕೂಡಿದವಾಗಿಯೂ ಇದ್ದುವು. ಭಾಷೆಯಲ್ಲಿ ಸಂಸ್ಕೃತ ಹೆಚ್ಚು; ವಿಷಯ ಧಾರ್ಮಿಕ; ಶೈಲಿ ಕಠಿಣ; ಪದ್ಯವಾದರೆ ದೊಡ್ಡ ದೊಡ್ಡ ಸಂಸ್ಕೃತ ವೃತ್ತಗಳು; ಗದ್ಯವಾದರೆ ಅಲಂಕಾರಗಳಿಂದ ತುಂಬಿದ ಜಟಿಲವಾಕ್ಯಗಳು—ಹೀಗೆ ಇರುತ್ತಿತ್ತು. ಹೆಚ್ಚು ಜನಕ್ಕೆ, ಅದರಲ್ಲಿಯೂ ವಿದ್ಯಾವಂತರಲ್ಲದ ಜನಸಾಮಾನ್ಯಕ್ಕೆ, ಯಾವುದಾದರೂ ಒಂದು ವಿಷಯವನ್ನು ತಿಳಿಸಬೇಕಾದರೆ ಅವರು ಆಡುವ ತಾಯಿಮಾತಿನಲ್ಲಿಯೇ ಸಾಧ್ಯ. ಈ ತತ್ತ್ವವನ್ನು ಬುದ್ಧ ಮಹಾವೀರ ಮುಂತಾದ ಮಹಾಪುರುಷರು ಗ್ರಹಿಸಿ, ಸಂಸ್ಕೃತಪ್ರಾಬಲ್ಯದ ಕಾಲದಲ್ಲಿಯೂ, ತಮ್ಮ ಸಂದೇಶವನ್ನು ಜನರು ಆಡುತ್ತಿದ್ದ ಪ್ರಾಕೃತದಲ್ಲಿಯೇ ಬೋಧಿಸಿದರು. ಈ ತತ್ತ್ವವನ್ನು ಜೈನರೂ ಒಪ್ಪಿ ನಮ್ಮ ದೇಶದ ಜನಕ್ಕೆ ಬಳಕೆಯಾದ ಕನ್ನಡವನ್ನೇ ತಮ್ಮ ಕಾರ್ಯಕ್ಕೆ ಬಳಸಿಕೊಂಡರು; ಕನ್ನಡದಲ್ಲಿ ಸಾಹಿತ್ಯವು ಆರಂಭವಾಯಿತು. ಆದರೆ ಆಗ ಅವರಿಗೆ ಮೇಲ್ಪಂಕ್ತಿಯಾಗಿದ್ದದ್ದು ಸಂಸ್ಕೃತ ಮಹಾಕಾವ್ಯ ಸಾಹಿತ್ಯ. ಇವುಗಳ ಮಾರ್ಗವನ್ನು ಅನುಸರಿಸಿ ಅವರು ರಾಮಾ

ಯಣ ಭಾರತ ಮುಂತಾದ ಪುರಾಣಕಾವ್ಯಗಳನ್ನೂ ತೀರ್ಥಂಕರ ಚರಿತ್ರೆಗಳನ್ನೂ ಬರೆದರು. ಎಲ್ಲೋ ಒಂದೆರಡು ಗದ್ಯಗ್ರಂಥ ಗಳೂ ಹುಟ್ಟಿದುವು. ಆದರೂ ಒಟ್ಟಿನಮೇಲೆ ಇವು ಪಂಡಿತರಿಗೆ ಸರಿ ಎನ್ನುವಂತಿದ್ದುವು. ಆದ್ದರಿಂದ ಹನ್ನೆರಡನೆಯ ಶತಮಾನದ ಹೊತ್ತಿಗೆ ಇವೇ ವಿಷಯಗಳನ್ನೇ ತೆಗೆದುಕೊಂಡು ಅವರು ಸುಲಭವಾಗಿ ಬರೆಯತೊಡಗಿದರು; ಕಥೆಗಳ ಮೂಲಕ ಉಪದೇಶಿಸಲು ಮೊದಲುಮಾಡಿದರು; ನಿತ್ಯಗಟ್ಟಲೆಯಲ್ಲಿ ಬಳಕೆಯಾಗಿರುವ ಸಂಗತಿಗಳನ್ನೂ ಸಾಮತಿಗಳನ್ನೂ ಹಾಡು ಗಳನ್ನೂ ಉಪಯೋಗಿಸಿಕೊಂಡರು.

ಆದರೆ ನಿಜವಾಗಿಯೂ ಭಾಷೆ ಸಾಹಿತ್ಯಗಳಲ್ಲಿ ಸೌಲಭ್ಯ ವನ್ನು ಕಲ್ಪಿಸಿಕೊಟ್ಟು ಸರಳವಾದ ಮಾತಿನಲ್ಲಿ ತಿಳಿವಳಿಕೆ ಕೊಟ್ಟವರು ವೀರಶೈವರು. ಇವರು ಹನ್ನೆರಡನೆಯ ಶತಮಾನ ದಿಂದ ಕನ್ನಡದಲ್ಲಿ ಗ್ರಂಥರಚನೆಮಾಡಿದರು. ಸಾವಿರಾರು ಜನ ಬರೆದರು; ಲಕ್ಷಾಂತರ ಜನ ಅದರ ಉಪಯೋಗವನ್ನು ಪಡೆದರು. ಏಕೆಂದರೆ, ಅವರು ಗದ್ಯವನ್ನು ಬರೆದರೆ ಆಡುವ ಮಾತಿನಲ್ಲಿ, ಬಳಕೆಯಲ್ಲಿದ್ದ ಮಾತುಗಳನ್ನೇ ಉಪಯೋಗಿಸಿ ಕೊಂಡು, ಬರೆಯುತ್ತಿದ್ದರು; ಪದ್ಯವನ್ನು ಬರೆದರೆ ಜನರ ಬಾಯಲ್ಲಿದ್ದ ಎಲ್ಲರೂ ಹೇಳಿ ಕೇಳಿ ಹಾಡುತ್ತಿದ್ದ ಷಟ್ಪದಿ, ಸಾಂಗತ್ಯ, ರಗಳೆ, ತ್ರಿಪದಿ, ಚೌಪದಿ ಮುಂತಾದ ಕನ್ನಡ ಪದ್ಯಜಾತಿಗಳನ್ನೇ ಉಪಯೋಗಿಸುತ್ತಿದ್ದರು. ಹೀಗೆ ಕನ್ನಡ ಬರೆಯುವುದೂ ಓದುವುದೂ ಸುಲಭವಾಯಿತು; ಅದು ನಮ್ಮ ದೆಂಬ ಭಾವನೆ ಹೆಚ್ಚಾಗಿ, ಮನಸ್ಸಿಗೆ ಅಂಟಿ, ಹೃದಯವನ್ನು ಹೊಕ್ಕು, ಜೀವನವನ್ನು ಹಸನುಮಾಡುವುದು ಸಾಧ್ಯವಾ ಯಿತು. ಸರ್ವಜ್ಞನು ಈ ಪಂಕ್ತಿಗೆ ಸೇರಿದ ಕವಿ.

# ೨. ಸರ್ವಜ್ಞನ ಕಾಲ, ದೇಶ, ಮತ

ಸರ್ವಜ್ಞನ ಕಾಲ, ದೇಶ, ಮುಂತಾದ ಸಂಗತಿಗಳಾಗಲಿ ತಾಯಿ, ತಂದೆ, ಗುರು ಮುಂತಾದವರ ವಿಚಾರವಾಗಲಿ ಯಾವುದೂ ನಿಷ್ಕರ್ಷೆಯಾಗಿ ಗೊತ್ತಾಗಿಲ್ಲ. ಅವನ ವಚನಗಳ ಭಾಷೆ ವಿಷಯ ಇವುಗಳ ಸ್ವರೂಪದ ಆಧಾರದಮೇಲೆ ಅವನ ಕಾಲವು ಸುಮಾರು ೧೬೦೦ ಎಂದು ಊಹಿಸುತ್ತಾರೆ. ಅವನ ವಚನಗಳಲ್ಲೇನೋ ಅವನ ಊರು, ತಾಯಿ, ತಂದೆ, ಇವರ ಹೆಸರನ್ನು ಹೇಳಿದಂತಿದೆ; ಆದರೆ ಈ ವಚನಗಳನ್ನು ಅವನೇ ಬರೆದನೋ ಇನ್ನಾರಾದರೂ ಬರೆದರೋ ತಿಳಿಯದು. ಜನಪ್ರಿಯ ವಾದ ಹಿಂದಿನ ಗ್ರಂಥಗಳಲ್ಲಿ ಅವನ್ನು ಓದುವವರೆಲ್ಲ ತಾವು ಕೇಳಿದ್ದು, ತಿಳಿದದ್ದು, ಚೆನ್ನಾಗಿದೆ ಎಂದುಕೊಂಡದ್ದು ಇವು ಗಳನ್ನು ಸೇರಿಸುವುದುಂಟು. ಹಾಗೇ ಸರ್ವಜ್ಞನ ಹೆಸರಿನಲ್ಲಿರುವ ಸಾವಿರಾರು ವಚನಗಳಲ್ಲಿ ಇತರರು ಬರೆದು ಸೇರಿಸಿರುವ ಹಲವು ಪದ್ಯಗಳಿರುವಂತೆ ತೋರುತ್ತದೆ. ಶ್ರೀಮಾನ್ ಚನ್ನಪ್ಪ ಉತ್ತಂಗಿ ಅವರು ಇವುಗಳನ್ನೆಲ್ಲಾ ಶೇಖರಿಸಿ, ಶೋಧಿಸಿ, ಬಹು ಕಷ್ಟಪಟ್ಟು ಸಂಪಾದನಮಾಡಿದ್ದಾರೆ. ಸರ್ವಜ್ಞನೇ ಬರೆದಿರಬಹುದಾದವು ಯಾವುವು, ಇತರರು ಬರೆದಿರಬಹುದಾದವು ಯಾವುವು ಎಂದು ಊಹಿಸಿ ಅಂಥ ಪದ್ಯಗಳನ್ನು ಗುರುತುಮಾಡಿದ್ದಾರೆ. ಆದರೂ ಇದನ್ನು ಹೀಗೇ ಎಂದು ನಿರ್ಧರಿಸಿ ಹೇಳುವಂತಿಲ್ಲ. ಇವುಗಳಲ್ಲಿ ಕೆಲವು ಪದ್ಯಗಳಿಂದ ಮುಂದಿನ ಅಂಶಗಳು ತಿಳಿದುಬರುತ್ತವೆ: ಸರ್ವಜ್ಞನು ಶಿವನ ಹತ್ತಿರವಿದ್ದ ಪುಷ್ಪದತ್ತನೆಂಬ ಗಣನಾಥನ ಅವತಾರ; ಅವನು ಹುಟ್ಟಿದ್ದು ಅಂಬಲೂರಿನಲ್ಲಿ; ತಂದೆ ಮಾಸೂರಿನ ಬಸವರಸ ಅಥವಾ ಮಲ್ಲರಸ ಎಂಬ ಆರಾಧ್ಯ

ಬ್ರಾಹ್ಮಣ ; ತಾಯಿ ಮಾಳಿ ; ಆಕೆ ಕುಂಬಾರಗಿತ್ತಿ ; ಇತ್ಯಾದಿ. ಮಾಸೂರು, ಅಂಬಲೂರು, ಇವು ಧಾರವಾಡ ಜಿಲ್ಲೆಯಲ್ಲಿರುವ ಊರುಗಳು. ಆದ್ದರಿಂದ ಸರ್ವಜ್ಞನು ಆ ಪ್ರಾಂತದಲ್ಲಿ ಹುಟ್ಟಿದವನಾಗಿದ್ದರೂ ಇರಬಹುದು. ಆದರೆ ತಂದೆತಾಯಿಗಳ ವಿಚಾರವೂ, ಅವನ ವಿಚಾರವಾಗಿ ಹುಟ್ಟಿರುವ ಹಲವು ದಂತಕಥೆಗಳೂ ಎಷ್ಟರಮಟ್ಟಿಗೆ ನಂಬಲರ್ಹವೋ ಹೇಳುವುದಕ್ಕಾಗುವುದಿಲ್ಲ. ಅವನ ಬಾಲ್ಯವಿಚಾರ ನಮಗೆ ಏನೂ ಖಚಿತವಾಗಿ ಗೊತ್ತಿಲ್ಲವೆಂದು ಒಪ್ಪಿಕೊಳ್ಳುವುದೇ ಮೇಲು. ಅನೇಕ ಮಹಾಕವಿಗಳು ಅಜ್ಞಾತವಾದ ಸಣ್ಣಪುಟ್ಟ ಗ್ರಾಮಗಳಲ್ಲಿ ಹುಟ್ಟಿ, ಬಡತನದಲ್ಲಿ ಬೆಳೆದು ತಮ್ಮ ಪ್ರಜ್ಞೆಯಿಂದಲೂ ಪ್ರತಿಭೆಯಿಂದಲೂ ಮುಂದೆ ಪ್ರಸಿದ್ಧಿಗೆ ಬರುತ್ತಾರೆ. ಅವರು ತಾವಾಗಿ ತಮ್ಮ ವಿಚಾರವನ್ನು ಹೇಳಿಕೊಂಡರೆ ಉಂಟು, ಇಲ್ಲದಿದ್ದರೆ ಇಲ್ಲ: ಹೀಗೆ ಅವರು ಹೇಳಿಕೊಳ್ಳಬೇಕು, ಅದನ್ನು ಕೇಳಿದವರು ಆದರದಿಂದ ಕೇಳಿ ಸತ್ಯದೃಷ್ಟಿಯಿಂದ ಬರೆಯಬೇಕು; ಹಿಂದೆ ನಮ್ಮಲ್ಲಿ ಇವೆರಡೂ ಇರಲಿಲ್ಲ; ಈಗಿನಂತೆ ತನ್ನ ವಿಚಾರವನ್ನು ಯಾವುದೇ ಉದ್ದೇಶದಿಂದಾಗಲಿ, ಆತ್ಮಕಥೆಯಾಗಿ ಬರೆದಿಟ್ಟವನು ಒಬ್ಬನೂ ಇಲ್ಲ; ಅಲ್ಪಸ್ವಲ್ಪ ತನ್ನ ವಿಚಾರವನ್ನು ಬರೆದವನು ತಾನು ಕಾಳಿದಾಸನನ್ನು ಮೆಟ್ಟಿಕ್ಕಿದವನು, ವ್ಯಾಸ ವಾಲ್ಮೀಕಿಗಳನ್ನು ತನ್ನ ಮುಂದೆ ನಿವಾಳಿಸಬೇಕು ಎಂಬ ಗರ್ವದಿಂದ ಬರೆದಿರುತ್ತಾನೆ; ಇಲ್ಲದಿದ್ದರೆ, ಕೇವಲ ನಿರ್ಗರ್ವಿಯಾಗಿ ಅಹಂಕಾರ ಲೇಶವನ್ನೂ ಹತ್ತಿರ ಬರಗೊಡಿಸದೆ, ಗ್ರಂಥದ ಆದ್ಯಂತವಾಗಿ ಹುಡುಕಿದರೂ ತನ್ನ ಹೆಸರು ಕೂಡ ಕಾಣದಂತೆ ಬರೆದಿರುತ್ತಾನೆ. ಆತ್ಮಕಥನವು ಅಷ್ಟು ಗ್ರಾಮ್ಯ, ತ್ಯಾಜ್ಯ, ತಾಮಸ, ಬಾಧಕ ಎಂದು ಅವರು ಯೋಚಿಸಿದ್ದರು. ಕಾಮಕ್ರೋಧ

ಗಳನ್ನು ಬಿಡಿ, ಅಹಂಕಾರ ಮಮಕಾರಗಳನ್ನು ತ್ಯಜಿಸಿ, ಎಂದು ಬೋಧಿಸುವವರು, ನಿರ್ವಂಚನೆಯಾಗಿ ಉಪದೇಶಿಸುವವರು, ತಮ್ಮ ಅಹಂಕಾರವನ್ನು ಬೆಳೆಯಗೊಡುತ್ತಾರೆಯೋ? ಬೋಧನೆಗೆ ಆಚರಣೆಯು ವಿರುದ್ಧವಾಗಿದ್ದರೆ ಬೋಧಕನಿಗೂ ಅವನ ಮಾತಿಗೂ ಏನು ಬೆಲೆ ಇದ್ದೀತು? ಇನ್ನು, ಕೇಳುವವರೂ ಅಷ್ಟೇ: ತಾತ್ವಿಕಬುದ್ಧಿಯಿಂದಲೂ, ಸಾಹಿತ್ಯದೃಷ್ಟಿಯಿಂದಲೂ, ಕೇಳಿ ಬರೆಯುತ್ತಿದ್ದವರು ಇಲ್ಲವೇ ಇಲ್ಲವೆನ್ನಬಹುದು. ನೋಡಿದ್ದರಲ್ಲಿ ಕೇಳಿದ್ದರಲ್ಲಿ ಅತಿಶಯ ಕಂಡರೆ ಅದಕ್ಕೆ ಬೆರಗುಪಟ್ಟು ಅದರಲ್ಲಿ ಅತಿಶಯೋಕ್ತಿಯನ್ನೂ ಆಶ್ಚರ್ಯವನ್ನೂ ಕಲ್ಪಿಸುವವರೇ ಹಲವು ಜನ. ಹೀಗೆ ಪ್ರತಿಯೊಬ್ಬ ಮಹಾಕವಿಯೂ, ಮಹಾಪುರುಷನೂ ದೇವಾಂಶಸಂಭೂತನಾಗಿಬಿಡುತ್ತಾನೆ. ಸರ್ವಜ್ಞನ ವಿಚಾರದಲ್ಲಿಯೂ ಹೀಗೆಯೇ ಆಗಿರುವಂತೆ ತೋರುತ್ತದೆ.

ಸರ್ವಜ್ಞನ ತ್ರಿಪದಿಗಳಲ್ಲಿ ಪ್ರಕ್ಷಿಪ್ತಭಾಗವಿರಬಹುದೆಂದು ಹಿಂದೆಯೇ ಹೇಳಿದೆಯಷ್ಟೆ; ಅವನ ಹೆಸರಿನಲ್ಲಿರುವ 'ಕಾಲಜ್ಞಾನ' ವಚನಗಳನ್ನು ನೋಡಿದರಂತೂ ಈ ಸಂದೇಹವು ಬಲವಾಗುತ್ತದೆ. ಇವುಗಳಲ್ಲಿ ಮೊನ್ನೆಮೊನ್ನೆ ನಡೆದ ಸಂಗತಿಗಳೂ ಸೇರಿಕೊಂಡಿವೆ. ಮಹಾಪುರುಷನಾದರೆ ಅವನು ಅದ್ಭುತ ಕಾರ್ಯಗಳನ್ನು ಮಾಡಬೇಕು, ಮುಂದೆ ಬರುವ ವೀರ ವಸಂತರಾಯನ ಕಾರ್ಯಕಲಾಪಗಳನ್ನು ತಿಳಿಸಬೇಕು, ಕಲಿ ಮಹಿಮೆಯನ್ನು ವಿವರಿಸಬೇಕು ಎಂದು ಜನ ತಿಳಿದುಕೊಂಡಿದ್ದಂತೆ ಕಾಣುತ್ತದೆ. ಎಲ್ಲರಿಗೂ ತಿಳಿದದ್ದನ್ನು ಇವನೂ ಹೇಳಿದರೆ ಇವನ ಮಹತ್ವವೇನು ಬಂತು? ಆದ್ದರಿಂದ ಇಂಥವರಲ್ಲಿ ಗೌರವವಿದ್ದವರು ಅವರ ಹೆಸರಲ್ಲಿ ಕಾಲಜ್ಞಾನವಿಲ್ಲದಿದ್ದರೆ ಅದು ಒಂದು ಲೋಪವೆಂದು ಭಾವಿಸಿ ಸೇರಿಸು

ತ್ತಾರೆ. ಹೀಗೆ ವಿದ್ಯಾರಣ್ಯರ ಹೆಸರಿನಲ್ಲಿಯೂ ಒಂದು 'ಕಾಲ ಜ್ಞಾನ'ವಿದೆ. ಆ ಕಾಲಜ್ಞಾನವನ್ನು ಅವರೂ ಬರೆಯಲಿಲ್ಲ ಈ ಕಾಲಜ್ಞಾನವನ್ನು ಇವನೂ ಬರೆಯಲಿಲ್ಲ; ಇದನ್ನು ಬರೆದವನು ಮತ್ತೊಬ್ಬ ಕವಿಯಾಗಿರುವುದು ಸಂಭವ.

'ಸರ್ವಜ್ಞ'ನ ಹೆಸರೇನು? ಸರ್ವಜ್ಞ ಎಂದೇಯೇ? ತಾಯಿ ತಂದೆಗಳು, ಹುಟ್ಟಿದ ಮಗುವಿಗೆ ಎಲ್ಲಿಯೂ ಈ ಹೆಸರನ್ನು ಇಟ್ಟಿದ್ದು ತಿಳಿದುಬಂದಿಲ್ಲ. ಸರ್ವಜ್ಞ, ಸುಗತ ಮುಂತಾದ ಹೆಸರುಗಳು ಬುದ್ಧನಿಗೆ ಉಂಟು. ಆದರೆ ಅವು ಅವನಿಗೆ ಅವನ ತಾಯಿ ತಂದೆಗಳು ಇಟ್ಟ ಹೆಸರಲ್ಲ; ವಯಸ್ಸು ಬಂದಮೇಲೆ ಈ ಹೆಸರನ್ನು ತಾನೇ ಇಟ್ಟುಕೊಂಡಿರಬಹುದೇ? ಇದೂ ಸಂಭವವಲ್ಲ; ಆಗ ಸರ್ವಜ್ಞನು ಅಹಂಕಾರದ ಮುದ್ದೆಯಾಗುತ್ತಾನೆ; ತನ್ನ ಗ್ರಂಥದ ತುಂಬ ನೀತಿಯನ್ನು ಹೇಳಿರುವವನು ತಾನು ಸರ್ವಜ್ಞನೆಂದು ತಿಳಿದುಕೊಂಡಿರಲಾರನು, ಹೇಳಿಕೊಂಡಿರಲಾರನು :

ಸರ್ವಜ್ಞನೆಂಬವನು ಗರ್ವದಿಂದಾದವನೆ?
ಸರ್ವರೊಳೊಂದೊಂದು ನುಡಿಗಲಿತು ವಿದ್ಯದ
ಪರ್ವತವೆ ಆದ ಸರ್ವಜ್ಞ ॥

ಸರ್ವಜ್ಞನೆಂದರೆ ಎಲ್ಲವನ್ನೂ ತಿಳಿದವನು; ಎಲ್ಲವನ್ನೂ ತಿಳಿದವನು ದೇವರೊಬ್ಬನು ಹೊರತು ಇನ್ನಾರಿರಬಲ್ಲರು? ತಿಳಿವನ್ನು ಕೊಡಬಲ್ಲವನೇ ಅವನು: ಅವನು ಜ್ಞಾನಸ್ವರೂಪ. ಕೊಟ್ಟ ತಿಳಿವನ್ನು ನುಡಿಸಬಲ್ಲವನು ಅವನು; ಆಡಿದ ನುಡಿಯೆಲ್ಲ ಆವನ ಹೊಗಳಿಕೆಯೇ. "ಸ್ತೋತ್ರಾಣಿ ಸರ್ವಾ ಗಿರಃ". ಈ ಮಾತನ್ನು ಅವನೇ

ಎನ್ನ ಮನಸಿಗೆ ನೆನಹ ಪನ್ನಗಧರ ಕೊಟ್ಟ
ಬಿನ್ನಣದಿಂದ ಸ್ತುತಿಗೈದು ಪೊಗಳುವೆ
ಚೆನ್ನಮೂರುತಿಯ ಸರ್ವಜ್ಞ ॥

ಎಂಬ ವಚನದಲ್ಲಿ ಹೇಳಿಕೊಂಡಂತಿದೆ.

ಇದು ಅವನಿಗೆ ಇತರರು ಕೊಟ್ಟ ಬಿರುದು ಎಂದು ಕೆಲವರು ಊಹಿಸುತ್ತಾರೆ. ಈ ಊಹೆಗೆ ಆಧಾರವಿಲ್ಲ. ಯಾರೋ ಕೊಟ್ಟ ಇಂಥ ಬಿಗುಮಾನದ ಬಿರುದನ್ನು ಅವನು ಪ್ರತಿ ವಚನಕ್ಕೂ ಸೇರಿಸಿಕೊಂಡಿದ್ದಾನೆಂದರೆ ಒಪ್ಪುವ ಮಾತಲ್ಲ. ರಾಜಾಸ್ಥಾನದಲ್ಲಿದ್ದ ಮಹಾಕವಿಗಳು ತಮಗೆ ಬಂದ ಬಿರುದುಗಳನ್ನೂ, ತಾವು ಇಟ್ಟುಕೊಂಡ ಬಿರುದುಗಳನ್ನೂ, ಹಿಂದಿನ ಕಾವ್ಯಗಳಲ್ಲಿ ಮೆರೆದದ್ದುಂಟು. ಅದರಿಂದ ಆತ್ಮತೃಪ್ತಿಯ ಜೊತೆಗೆ, ಆಶ್ರಯದಾತನ ಸಂತೋಷವೂ, ಆಸ್ಥಾನ ಕವಿಗಳ ದುಬ್ಬಿಯೂ ಬಂದಿದ್ದಿರಬಹುದು. ಆದರೆ ಸರ್ವಜ್ಞನು ಯಾವ ಆಸ್ಥಾನದಲ್ಲಿಯಾದರೂ ಇದ್ದು ಯಾರ ಹಂಗಿಗಾದರೂ ಸಿಕ್ಕಿ ಯಾರ ಹೊಟ್ಟೆಯ ಕಿಚ್ಚನ್ನಾದರೂ ಎಬ್ಬಿಸಿ ತನ್ನ ಹೊಟ್ಟೆಯನ್ನು ತಣ್ಣಗೆ ಮಾಡಿಕೊಳ್ಳಬೇಕೆಂಬ ಮನೋಭಾವವುಳ್ಳವನಾಗಿದ್ದಂತೆ ತೋರುವುದಿಲ್ಲ. ಹಿಂದಿನ ವೀರಶೈವ ವಚನಗಳನ್ನೂ, ದಾಸರ ಕೀರ್ತನೆಗಳನ್ನೂ ನೋಡಿದರೆ ಅವರು ತಮ್ಮ ಹಾಡಿನ ಕೊನೆಗೆ ಅಂಕಿತ ಹಾಕುವುದು ಕಂಡುಬರುತ್ತದೆ. ಈ ಅಂಕಿತವು ಆಯಾ ವಚನಕಾರರ ಅಥವಾ ಕೀರ್ತನಕಾರರ ಇಷ್ಟ ದೇವತೆಯದಾಗಿರುತ್ತದೆ: ಕೂಡಲಸಂಗಮದೇವ, ಚೆನ್ನಮಲ್ಲಿಕಾರ್ಜುನ, ಗುಹೇಶ್ವರ, ಪುರಂದರವಿಠಲ ಇತ್ಯಾದಿ. ಅದರಂತೆ “ಸರ್ವಜ್ಞ” ಎಂಬುದು ಎಲ್ಲವನ್ನೂ ತಿಳಿದ ಜ್ಞಾನಸ್ವರೂಪನಾದ ಭಗವಂತನನ್ನು ಮನಸ್ಸಿನಲ್ಲಿಟ್ಟುಕೊಂಡು ಉಪಯೋಗಿ

ಸಿರುವ ಅಂಕಿತವಾಗಿ ಕಾಣುತ್ತದೆ. ಆದರೆ ಸರ್ವಜ್ಞ ಎಂಬ ಹೆಸರುಳ್ಳ ಯಾವ ದೇವತೆಯೂ, ಯಾವ ಕ್ಷೇತ್ರದಲ್ಲಿಯೂ ಇಲ್ಲ; ಆದ್ದರಿಂದ ಸರ್ವಜ್ಞನು ಇಂಥ ಊರಿನವನು, ಇಂಥ ದೇವರ ಭಕ್ತ ಎಂದು ಹೇಳುವಹಾಗಿಲ್ಲ. ಅವನ ಇಷ್ಟದೇವತೆ "ಒಬ್ಬ ಸರ್ವಜ್ಞ ಕರ್ತನು. ಜಗಕೆಲ್ಲ ಒಬ್ಬನೇ ದೈವ!".

ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಿಂ ಕೇಳುತಂ
ಕೆಲವಂ ಮಾಳ್ಪವರಿಂದ ಕಂಡು ಕೆಲವಂ ಸುಜ್ಞಾನದಿಂ ನೋಡುತಂ
ಕೆಲವಂ ಸಜ್ಜನಸಂಗದಿಂದಲರಿಯಲ್ ಸರ್ವಜ್ಞನಪ್ಪಂ ನರಂ
ಪಲವುಂ ಪಳ್ಳ ಸಮುದ್ರವೈ ಹರಹರಾ ಶ್ರೀಚೆನ್ನಸೋಮೇಶ್ವರಾ ॥

ಎಂಬ ಸೋಮೇಶ್ವರಶತಕದ ಒಂದು ಪದ್ಯವನ್ನು ಎಲ್ಲರೂ ಓದಿದ್ದೇವೆ. ಇದಕ್ಕೂ ಈ ಸರ್ವಜ್ಞನಿಗೂ ಏನಾದರೂ ಸಂಬಂಧವಿದೆಯೋ ಏನೋ ತಿಳಿಯದು. ಸರ್ವಜ್ಞನಾಗಬೇಕಾದರೆ ದೇವರೇ ಆಗಬೇಕಾಗಿಲ್ಲ. ಮನುಷ್ಯನು ಸಂತತವಾಗಿ, ಶ್ರದ್ಧೆಯಿಟ್ಟು, ಕಲಿಯುತ್ತಹೋದರೆ ಎಲ್ಲವನ್ನೂ ತಿಳಿಯಬಹುದು ಎಂಬುದು ಇದರ ಅಭಿಪ್ರಾಯ.

'ಸರ್ವಜ್ಞ' ಎಂಬುದನ್ನು ಅಂಕಿತವೆಂದು ಒಪ್ಪಿಕೊಂಡರೆ, ಈ ಕವಿಯು ಯಾವ ಮತದವನೆಂದು ಅದರಿಂದಲೇ ಊಹಿಸುವುದು ಕಷ್ಟವಾಗುತ್ತದೆ. ಏಕೆಂದರೆ ಮೇಲೆ ಹೇಳಿದಂತೆ "ಸರ್ವಜ್ಞ" ಎಂಬ ಹೆಸರುಳ್ಳ ಯಾವ ಶೈವ ವೈಷ್ಣವ ಜೈನ ಬೌದ್ಧ ದೇವತೆಗಳೂ ತಿಳಿದುಬಂದಿಲ್ಲ. ಅವನ ಗ್ರಂಥವನ್ನು ನೋಡಿದರೆ ಷಟ್‌ಸ್ಥಲ, ಅಷ್ಟಾವರಣ ಮುಂತಾದ ವೀರಶೈವ ಧರ್ಮಕ್ಕೆ ಸಂಬಂಧಪಡುವ ಕೆಲವು ವಿಚಾರಗಳನ್ನು ಕುರಿತ ಪದ್ಯಗಳು ದೊರೆಯುತ್ತವೆ. ಆದ್ದರಿಂದ ಸರ್ವಜ್ಞನು ವೀರಶೈವನೆನ್ನಬಹುದು. 'ವಚನ'ಗಳು ಎಂದು ಅವನ ಪದ್ಯಗಳು

ರೂಢಿಯಾಗಿರುವುದೂ ಇದನ್ನೇ ಸೂಚಿಸುತ್ತದೆ. ವಚನ ಎಂದರೆ ಮಾತು—ಹೇಳಿದ್ದು. ಆದರೆ ಇದಕ್ಕೆ ಗದ್ಯರೂಪವಾದ ಉಕ್ತಿ, ನೈತಿಕ ಧಾರ್ಮಿಕ ಭಾವಗಳನ್ನು ಒಳಕೊಂಡ ನುಡಿ, ಎಂಬ ಅರ್ಥವೂ ಇದೆ. ಇಂಥ 'ವಚನ' ಸಾಹಿತ್ಯವನ್ನು ಕನ್ನಡದಲ್ಲಿ ಸೃಷ್ಟಿಸಿ ಬೆಳೆಮಾಡಿದವರು ವೀರಶೈವರು. ಸರ್ವಜ್ಞನು —

ಇಂದ್ರನಾನೆಯನೇಱಿ ಒಂದನೂ ಕೊಡಲಱಿಯ
ಚಂದ್ರಶೇಖರನು ಮುದಿಯೆತ್ತನೇಱಿ ಬೇ
ಕೆಂದುದನು ಕೊಡುವ ಸರ್ವಜ್ಞ ||

ಎಂದೂ "ಮೂಱುಕಣ್ಣೀಶನೇ ದೈವ", "ಪರದೈವ ಈಶನಿಂದಲ್ಲ" "ದೈವವು ರುದ್ರನಿಂದಿಲ್ಲ" ಎಂದು ಮುಂತಾಗಿಯೂ ಶಿವನ ಪಾರಮ್ಯವನ್ನು ಹೊಗಳಿದ್ದರೂ, ಅವನ ಶಿವನು ಪುರಾಣಕೀರ್ತಿತನಾದ ಕೈಲಾಸಾಧಿಪತಿ ಮಹೇಶ್ವರನಲ್ಲ; ಅವನು ಈ ಸೃಷ್ಟಿಗೆಲ್ಲಾ ಆದಿಯಾದ ಚೈತನ್ಯಸ್ವರೂಪಿ —

ಆ ದೇವ ಈ ದೇವ ಮಾದೇವನೆನಬೇಡ
ಆ ದೇವರ ದೇವ ಭುವನ ಪ್ರಾಣಿಗಳಿ
ಗಾದವನೆ ದೇವ ಸರ್ವಜ್ಞ ||

ಈ ಸೃಷ್ಟಿಯ ಚಿತ್ರವಿಚಿತ್ರಗಳಿಗೂ, ರಸರುಚಿಗಳಿಗೂ ಕಾರಣನಾದವನು ಅವನೇ ; ಎಲ್ಲವೂ ಅವನ ವಿಲಾಸದ ವೈಭವಗಳೇ ; ಅವನಂಥ ಶಿಲ್ಪಿ, ಕಲಾವಂತ, ಮತ್ತೊಬ್ಬನಿಲ್ಲ. ಅವನು ಸರ್ವಸಮರ್ಥ.

ಚಿತ್ರವನು ನವಿಲೊಳು ವಿಚಿತ್ರವನು ಗಗನದೊಳು
ಪತ್ರಪುಷ್ಪಗಳ ವಿವಿಧವರ್ಣಗಳಿಂದ
ಚಿತ್ರಿಸಿದರಾರು ? ಸರ್ವಜ್ಞ ||

ಇಂಗಿನೊಳು ನಾತವನು ತೆಂಗಿನೊಳಗೆಳನೀರ
ಭೃಂಗ ಕೋಕಿಲೆಯ ಕಂಠದಿ ಗಾಯನವ
ತುಂಬಿದವರಾರು ? ಸರ್ವಜ್ಞ ॥

ಇಂಥ ದೇವರನ್ನು ಯಾರು ಒಪ್ಪುವುದಿಲ್ಲ? ಪೂಜಿಸುವುದಿಲ್ಲ? ದೇವರಿಗೆ ಈ ಗುಣಗಳನ್ನು ಹೇಳಿದರೆ ಜಾತಿ ಮತ ವೈಷಮ್ಯಗಳು ಏಕೆ ಬಂದಾವು ?

## ೩. ಸರ್ವಜ್ಞವಚನಗಳ ಸ್ವರೂಪ

ಹಿಂದೆ, ಅವರಲ್ಲಿಯೂ ವಿಶೇಷವಾಗಿ ನಮ್ಮ ದೇಶದಲ್ಲಿ, ಧರ್ಮಕ್ಕೆ ಪ್ರಾಧಾನ್ಯವಿತ್ತು. ಜನರು ಪುಣ್ಯ, ಪಾಪ, ಸ್ವರ್ಗ, ನರಕ, ದೇವರು, ಪರಲೋಕ ಇವುಗಳಲ್ಲಿ ನಂಬಿಕೆಯಿಟ್ಟುಕೊಂಡಿದ್ದರು. ಮೋಕ್ಷವೇ ಪರಮ ಪುರುಷಾರ್ಥವಾಗಿತ್ತು. ಅದಕ್ಕೆ ಧರ್ಮವೇ ಮುಖ್ಯಸಾಧನ, ಮೊದಲನೆಯ ಸಾಧನ. ಧರ್ಮಕ್ಕೆ ವಿರುದ್ಧವಲ್ಲದ ಅರ್ಥ, ಕಾಮ (ಎಂದರೆ ಸಂಪಾದನೆ, ಆಶೆ) ಇವೂ ಪುರುಷಾರ್ಥಗಳೇ: ಸತ್ಪ್ರವೃತ್ತಿಯೂ ಅದನ್ನು ಈಡೇರಿಸಲು ಬೇಕಾದ ಸಂಪತ್ತೂ ಇಲ್ಲದಿದ್ದರೆ ಧರ್ಮವು ನಡೆಯುವುದಿಲ್ಲ. ಹೇಗೆಂದರೆ, ಒಬ್ಬನಿಗೆ ದಾನಧರ್ಮಾದಿಗಳನ್ನು ಮಾಡಬೇಕೆಂಬ ಮನಸ್ಸೂ, ಮಾಡಲು ಬೇಕಾದ ಹಣವೂ ಇಲ್ಲದಿದ್ದರೆ, ಅವನು ದಾನಮಾಡುವುದು ಹೇಗೆ? ಧರ್ಮಗಳಿಸುವುದು ಹೇಗೆ ? ಬರಿಯ ಕೈಯಲ್ಲಿ ಮೊಳಹಾಕುವುದರಿಂದ ಏನು ಪ್ರಯೋಜನ ? ಆದ್ದರಿಂದ ಹಿಂದಿನ ಗ್ರಂಥಗಳು ಮೋಕ್ಷವನ್ನೂ ಅದಕ್ಕೆ ಸಾಧಕವಾಗಿ ಭಕ್ತಿ ಜ್ಞಾನ ವೈರಾಗ್ಯಗಳನ್ನೂ ಬೋಧಿಸುವುದರ ಜೊತೆಗೆ, ಇಹಲೋಕದಲ್ಲಿರುವವರಿಗೆ ಸದಾ

ಚಾರವನ್ನೂ ಬೋಧಿಸುತ್ತವೆ. ಇದೇ ಲೌಕಿಕನೀತಿ. ಇಲ್ಲಿ ಬದುಕಿರುವವರಿಗೆ ಒಳ್ಳೆಯ ನಡತೆಯಲ್ಲಿ ನಡೆದರೆ ಪರದಲ್ಲಿ ಸದ್ಗತಿ ದೊರೆತೇ ದೊರೆಯುತ್ತದೆ. ಇಲ್ಲಿ ಸಲ್ಲುವವನು ಅಲ್ಲಿಯೂ ಸಲ್ಲುವನು. ಅಷ್ಟೇ ಅಲ್ಲ; ಇಲ್ಲಿಯೇ ಜ್ಞಾನಪಡೆದು, ಜೀವನ್ಮುಕ್ತನಾಗಬಹುದು. ಹಾಗೆ ಜ್ಞಾನಿಯಾದವನು ಈ ಲೋಕದಲ್ಲಿ, ಸಂಸಾರಮಧ್ಯದಲ್ಲಿ ಇದ್ದರೂ, ಚಿಪ್ಪು ಬಿಟ್ಟ ಗಿಟಕಿನಂತೆ ಮುಕ್ತನಾಗಿಯೇ ಇರುತ್ತಾನೆ. ಕಾಲಕ್ರಮದಲ್ಲಿ ದೇಹ ಬಿದ್ದು ಹೋದರೆ, ಅಂಥ ಜೀವಕ್ಕೆ ಮತ್ತೆ ಅದರ ಸಂಬಂಧ ಬರುವುದಿಲ್ಲ.

ಶಾಸ್ತ್ರಗಳೂ ಧಾರ್ಮಿಕ ಕಾವ್ಯಗಳೂ ಇದನ್ನೇ ಪೂರ್ತಿಯಾಗಿಯೋ ಪ್ರಧಾನವಾಗಿಯೋ ಹೇಳುತ್ತವೆ. ಲೌಕಿಕಕಾವ್ಯಗಳಲ್ಲಿ ಯಾವನೋ ಒಬ್ಬ ರಾಜನ ಅಥವಾ ಮಹಾಪುರುಷನ ಕಥೆ ಬಂದರೂ, ಅದರ ಹಿನ್ನೆಲೆ, ಉದ್ದೇಶ, ಇವೆಲ್ಲವೂ ಧಾರ್ಮಿಕವಾಗಿಯೇ ಇರುತ್ತವೆ. ಈ ಲೋಕದಲ್ಲಿ ಇರುವತನಕ ಅವನು ಹೇಗೆ ಹತ್ತು ಜನಕ್ಕೆ ಮೇಲ್ಪಂಕ್ತಿಯಾಗಿದ್ದು, ಒಳ್ಳೆಯ ನಡತೆ ನಡೆದು ಕೊನೆಗೆ ಸದ್ಗತಿ ಪಡೆದನೆಂದು ಅವು ದೃಷ್ಟಾಂತ ಪಡಿಸುತ್ತವೆ. ನೀತಿಯನ್ನುಳಿದು ಧರ್ಮವಿಲ್ಲ; ಸದಾಚಾರವಿಲ್ಲದೆ ಸದ್ಗತಿಯಿಲ್ಲ; ಇಹವಿಲ್ಲದೆ ಪರವಿಲ್ಲ; ಇಹದಲ್ಲಿ ಹತ್ತು ಮೆಟ್ಟಲನ್ನು ಹತ್ತಿದರೆ ಹನ್ನೊಂದನೆಯ ಮೆಟ್ಟಲೇ ಪರ. ಆದ್ದರಿಂದ ಧರ್ಮವನ್ನು ಬೋಧಿಸುತ್ತೇವೆಂದು ಹೊರಡುವವರು, ಮೊದಲು ತಳಹದಿಯಾಗಿ ಶಮದಮಾದಿ ಸಂಪತ್ತಿಯನ್ನು ವಿವರಿಸುತ್ತಾರೆ; ನೀತಿಯನ್ನು ಬೋಧಿಸುತ್ತೇವೆಂದು ಹೊರಡುವವರು ಅದರ ಫಲವು ಶಾಂತಿ, ಸೌಖ್ಯ, ಸದ್ಗತಿ ಎನ್ನುತ್ತಾರೆ. ಹೀಗೆ ತಮಿಳಿನಲ್ಲಿ ಪ್ರಸಿದ್ಧವಾದ ಕುಱಳ್ ಎಂಬ ಪ್ರಾಚೀನ ನೀತಿಕಾವ್ಯವು

ಅ ಱಂ, ಪೊರುಳ್, ಇನ್ಬಂ (ಧರ್ಮ, ಅರ್ಥ, ಕಾಮ) ಎಂದು ಮೂರು ಭಾಗವಾಗಿದೆ; ಭರ್ತೃಹರಿಯ ನೀತಿ ಗ್ರಂಥವು ನೀತಿಶತಕ, ಶೃಂಗಾರಶತಕ, ವೈರಾಗ್ಯಶತಕ ಎಂದು ಮೂರು ಭಾಗವಲ್ಲಿದೆ. ನೀತಿಯನ್ನು ಅನುಸರಿಸಿ ಧರ್ಮದಲ್ಲಿ ನಡೆದರೆ ಜ್ಞಾನವೂ ಮೋಕ್ಷವೂ ತಾನಾಗಿ ಲಭಿಸುವುವೆಂಬುದು ಅವರ ಭಾವವಾಗಿ ಕಾಣುತ್ತದೆ. ವೀರಶೈವ ವಚನಕಾರರೂ ಹೀಗೆ ಮೊದಲ ಮೂರು 'ಸ್ಥಲ'ಗಳಲ್ಲಿ ಬೋಧಿಸುವುದು ಸದಾಚಾರ ಸತ್ಕರ್ಮಗಳೇ. ಅವುಗಳ ಫಲವಾಗಿ ಮುಂದಿನ ಮೂರು ಸ್ಥಲಗಳಲ್ಲಿ ಜೀವವು ಹೆಚ್ಚು ಹೆಚ್ಚಾಗಿ ಸಂಸ್ಕಾರ ಹೊಂದಿ, ಕೊನೆಗೆ " ಲಿಂಗ "ದಲ್ಲಿ ಸಮರಸವಾಗಿ ಸೇರಿಹೋಗುತ್ತದೆ. ಆದರೆ ವಚನಗಳಲ್ಲಿ ಈ ಸ್ಥಲಭೇದಗಳನ್ನು ಸಾಮಾನ್ಯವಾಗಿ, ನಾವು ಕಂಡುಕೊಳ್ಳಬಹುದಾದರೂ ಎಲ್ಲ ವಚನಕಾರರೂ ಹೀಗೆ ವಿಭಾಗಮಾಡಿಕೊಂಡೇನೂ ತಮ್ಮ ವಚನಗಳನ್ನು ಬರೆದಿಟ್ಟಿಲ್ಲ; ಅನೇಕ ವಚನಗಳನ್ನು ಶರಣರು ಸ್ಫೂರ್ತಿ ಬಂದಾಗ ಅಂದು, ಅವು ತಮ್ಮ ಅಂತಸ್ಸತ್ವದಿಂದಲೂ ಸತ್ಯಸಾರದಿಂದಲೂ ಒಬ್ಬರ ಬಾಯಿಂದ ಇನ್ನೊಬ್ಬರ ಬಾಯಿಗೆ ಬಿದ್ದು ವಚನಕರ್ತೃಗಳ ಎಷ್ಟೋ ಕಾಲದ ಅನಂತರ ಬರೆಹಕ್ಕೂ ಪುಸ್ತಕ ರೂಪಕ್ಕೂ ಬಂದಂತೆ ತೋರುತ್ತದೆ. ಈಗ ಪ್ರಕಟವಾಗಿರುವ ಅನೇಕ ವಚನಗ್ರಂಥಗಳಲ್ಲಿ ಭಕ್ತ ಮಾಹೇಶ್ವರ ಮುಂತಾದ ವಿಭಾಗಗಳು ಆಯಾ ಸಂಪಾದಕರು ಮಾಡಿಕೊಂಡವು. ಇದರಂತೆ ಸರ್ವಜ್ಞನ " ವಚನ " ಗಳೂ ಕೂಡ. ಅವು ಪ್ರಾಸಬದ್ಧವಾದ, ವಡಿಬದ್ಧವಾದ ತ್ರಿಪದಿಗಳು. ಆದ್ದರಿಂದ ಅವನ್ನು ಸರ್ವಜ್ಞನು ವಚನಕಾರರಂತೆ, ಅಪ್ರಯತ್ನವಾಗಿ, ತನ್ಮಯನಾಗಿ ಸ್ಫೂರ್ತಿಮತ್ತಾಗಿ ಎಲ್ಲಿಯೋ ಅಂದುಬಿಟ್ಟು ಹೋದ

ನೆಂದು ಹೇಳುವಹಾಗಿಲ್ಲ. ಆದರೆ, ಧರ್ಮ, ಅರ್ಥ, ಕಾಮ, ಮೋಕ್ಷ, ನೀತಿ, ಜ್ಞಾನ, ಸದಾಚಾರ, ಸದ್ಗತಿ, ಲೌಕಿಕ ಪಾರಮಾರ್ಥಿಕ ಎಂದು ಮುಂತಾಗಿ ಯಾವ ವಿಭಾಗ ಕ್ರಮ ವನ್ನೂ ಮನಸ್ಸಿನಲ್ಲಿಟ್ಟುಕೊಂಡು, ಕವಿಗಳೂ ಕಥೆಗಾರರೂ ಒಂದು ಪರಿಚ್ಛೇದವಾಗುತ್ತಲೂ ಮತ್ತೊಂದು ಪರಿಚ್ಛೇದವನ್ನು ಬರೆಯುವಂತೆ, ಕ್ರಮವರಿತು ಕಟ್ಟಿಗೆ ಸಿಕ್ಕಿ ಬರೆದಿಲ್ಲ; ಬರೆದಿಡ ಬೇಕೆಂದು ಆಶೆಯೂ ಅವನಿಗೆ ಇದ್ದಂತೆ ತೋರುವುದಿಲ್ಲ. ಆದರೆ ಗದ್ಯ ವಚನಗಳಿಗಿಂತಲೂ ಇವು ಬಿಗಿಯಾಗಿ, ಹಿಡಿತ ವಾಗಿ, ಸೊಗಸಾಗಿ, ರಾಗವಲ್ಲಿದ್ದದ್ದರಿಂದ ಹೆಚ್ಚಾಗಿ ಮನಸ್ಸಿಗೆ ಅಂಟಿ, ನಾಟಿ, ದೃಢವಾಗಿ ನಿಂತಿರಬೇಕು, ಅಷ್ಟೇ. ನಮ್ಮ ಅನು ಕೂಲಕ್ಕೋಸ್ಕರ ನಾವು ಅವುಗಳನ್ನು ವಿಚಾರಾನುಸಾರವಾಗಿ ವಿಭಾಗಮಾಡಿಕೊಳ್ಳಬಹುದು.

# ೪. ದೇವರು-ಗುರು-ಜ್ಞಾನಿ

ವೀರಶೈವರು ಶಿವಭಕ್ತರಾದರೂ ಅವರ ಚರಮಲಕ್ಷ್ಯ ಕೈಲಾಸದಲ್ಲಿ ಗಿರಿಜೆಯೊಡನೆಯೂ ಗಣಗಳೊಡನೆಯೂ ಕೂಡಿ ಕೊಂಡು ಕೇಳಿದ್ದನ್ನು ಕೊಡಬಲ್ಲ ಮಹೇಶ್ವರನಲ್ಲ; ಅವನನ್ನು ಒಲಿಸಿಕೊಂಡು ಅವನೊಡನೆ ಸಾಲೋಕ್ಯ ಸಾರೂಪ್ಯಗಳನ್ನು ಪಡೆಯುವುದಲ್ಲ. ಅವರ ಧರ್ಮವು ಭಕ್ತಿಯಿಂದ ಮೊದಲಾ ದರೂ ಆ ಭಕ್ತಿಗೆ ವಿಷಯನಾದವನು ಲಿಂಗಸ್ವರೂಪಿಯಾದ ಸೂಕ್ಷ್ಮವಸ್ತು. ಅದಕ್ಕೆ

ಆಗಿಲ್ಲ ಹೋಗಿಲ್ಲ ಮೇಗಿಲ್ಲ ಕೆಳಗಿಲ್ಲ<br>
ತಾಗಿಲ್ಲ ತಪ್ಪುತಡೆಯಿಲ್ಲ ಲಿಂಗಕೆ<br>
ದೇಗುಲವೆ ಇಲ್ಲ ಸರ್ವಜ್ಞ ॥

ಇದು ದೊರೆಯಬೇಕಾದರೆ ಗುರುಸಹಾಯ ಬೇಕು:

> ಹರ ತನ್ನೊಳಿರ್ದು ಗುರು ತೋಱದೇ ತಿಳಿವುದೇ
> ಮರದೊಳಗಗ್ನಿ ಯಿರುತಿರ್ದು ತನ್ನ ತಾ
> ನಱಿಯದೇಕೆಂದ ಸರ್ವಜ್ಞ ||

ಈ ಗುರುವು ವಿದ್ಯಾವಂತನಾಗಲಿ, ಬ್ರಾಹ್ಮಣನಾಗಲಿ, ಮಠಾಧಿಪತಿಯಾಗಲಿ ಆಗಬೇಕೆಂಬುದಿಲ್ಲ. ಅವನು ಸಾರವಾದ ಸತ್ಯವಸ್ತುವನ್ನು ಅರಿತವನಾಗಿದ್ದರೆ ಸರಿ.—

> ಊರಿಂಗೆ ದಾರಿಯನು ಯಾರು ತೋಱಿದೊಡೇನು
> ಸಾರಾಯದಾ ನಿಜವ ತೋಱುವ ಗುರುವು
> ಯಾರಾದೊಡೇನು ಸರ್ವಜ್ಞ ||

ಆಗ ಅದು, ಮೊಸರು ಕಡೆದರೆ ಬೆಣ್ಣೆ ಸಿಕ್ಕುವಂತೆ, ಉಂಡೆಯಾಗಿ ಕೈಗೆ ಸಿಕ್ಕುತ್ತದೆ. ಆದರೆ ಶಿಷ್ಯನೂ ಯೋಗ್ಯನಾಗಿರಬೇಕು; ತಕ್ಕ ಅಧಿಕಾರಿಯಾಗಿರಬೇಕು; ಇಲ್ಲದಿದ್ದರೆ ಯಾವ ಗುರುವಿನ ಆಟವೂ ನಡೆಯುವುದಿಲ್ಲ. ಏಕೆಂದರೆ

> ಶ್ವಾನ ತೆಂಗಿನಕಾಯ ತಾನು ಮೆಲಬಲ್ಲುದೇ ?
> ಹೀನಮನದವನಿಗುಪದೇಶವಿತ್ತಡೆ
> ಹಾನಿ ಕಾಣಯ್ಯ ಸರ್ವಜ್ಞ ||
>
> ಹಸಿಯ ಸಮಿಧೆಯ ತಂದು ಹೊಸೆದರುಂಟೇ ಕಿಚ್ಚು ?
> ವಿಷಯಂಗಳುಳ್ಳ ಮನುಜಗೆ ಗುರುಕರುಣ
> ವಶವರ್ತಿಯಹುದೆ ? ಸರ್ವಜ್ಞ ||

ಹಾಗಲ್ಲದೆ ಶಿಷ್ಯನು ಯೋಗ್ಯನಾಗಿದ್ದು ಅವನಿಗೆ ಸದ್ಗುರುವು ದೊರೆತರೆ "ಬೊಮ್ಮವೆಂಬುದು ತಾನು ಒಮ್ಮಾರು ದೂರ!" ಕೈನೀಡಿದರೆ ಸಾಕು, ಸಿಕ್ಕುತ್ತದೆ.

ಗುರುಪಾದಸೇವೆ ತಾ ದೊರೆಕೊಂಡಿತಾದಡೆ
ಹಿರಿದಪ್ಪ ಪಾಪ ಪಱಿವುದು ಕರ್ಪೂರದ
ಗಿರಿಯು ಬೆಂದಂತೆ ಸರ್ವಜ್ಞ ||

ಅಜ್ಞಾನವು ಬೆಟ್ಟದಂತೆ ಕವಿದುಕೊಂಡಿದ್ದರೂ ಅದು ಕ್ಷಣ ಮಾತ್ರದಲ್ಲಿ ನಿರ್ನಾಮವಾಗುವುದು.

ದೇವರು ಸರ್ವವ್ಯಾಪಿಯಾಗಿರುವುದರಿಂದ ಅವನು ನಮ್ಮಲ್ಲಿಯೂ ಇರಲೇಬೇಕಷ್ಟೆ:

ಸಣ್ಣನೆಯ ಮಳಲೊಳಗೆ ಸುಣ್ಣನೆಯ ಶಿಲೆಯೊಳಗೆ
ಬಣ್ಣಿಸಿ ಬರೆವ ಪಟದೊಳಗೆ ಇರುವಾತ
ತನ್ನೊಳಗೆ ಇರನೆ ಸರ್ವಜ್ಞ ||

ಕಲ್ಲಿನಲಿ ಮಣ್ಣಿನಲಿ ಮುಳ್ಳಿನಾ ಮೊನೆಯಲ್ಲಿ
ಎಲ್ಲಿ ನೆನೆದಲ್ಲಿ ಶಿವನಿರ್ಪ ಅವ ನೀನಿ
ದ್ದಲ್ಲಿಯೇ ಇರುವ ಸರ್ವಜ್ಞ ||

ಸತ್ಯವೆಂಬುದು ತಾನು ಹಿತ್ತಲದ ಗಿಡ ನೋಡ
ಮತ್ತೆಲ್ಲಿ ನೋಡಿಯಱಿಸದೆ ತಾನಿರ್ದ
ಹತ್ತಿಲೇ ನೋಡ ಸರ್ವಜ್ಞ ||

ತನಗಿಂತ ಹತ್ತಿರವಾದ ಸ್ಥಳವಾವುದು? ತನ್ನ ವಸ್ತುವಿಗಿಂತ ಹೆಚ್ಚಾಗಿ ಅನುಭವಕ್ಕೆ ಬರಬಲ್ಲದ್ದಾವುದು? ಆದ್ದರಿಂದ ಗುಡಿಗೆ ಹೋಗಿ ಪ್ರತಿಮೆಗಳನ್ನು ಪೂಜಿಸುವುದು ನಿಷ್ಪ್ರಯೋಜನ—

ತನ್ನಲಿಹ ಲಿಂಗವನು ಮನ್ನಿಸಲಿಕಱಿಯದೇ
ಬಿನ್ನಣದಿ ಕಡೆದ ಪ್ರತಿಮೆಗಳಿಗೆಱಗುವ
ಅನ್ನೆಯವ ನೋಡು ಸರ್ವಜ್ಞ ||

ಕಲ್ಲುಕಲ್ಲನೆ ಒಟ್ಟಿ ಕಲ್ಲಿನಲಿ ಮನೆಕಟ್ಟಿ
ಕಲ್ಲ ಮೇಲ್ಕಲ್ಲ ಕೊಳುವ ಮಾನವರೆಲ್ಲ
ಕಲ್ಲಿನಂತಹರು ಸರ್ವಜ್ಞ ॥

ಕಲ್ಲಿನ ದೇವಾಲಯವನ್ನು ಕಟ್ಟಿ ಅದರಲ್ಲಿ ಕಲ್ಲಿನ ವಿಗ್ರಹ ವನ್ನೋ ಲಿಂಗವನ್ನೋ ದೇವರೆಂದು ಪ್ರತಿಷ್ಠಿಸಿದರೆ, ಅದು ಕಲ್ಲ ಮೇಲೆ ಕಲ್ಲಿಟ್ಟಂತಲ್ಲವೇ ಮತ್ತೇನು? ಕಲ್ಲಿಗಿಂತ ತನ್ನಲ್ಲಿ ಪರ ಮಾತ್ಮನು ಹೆಚ್ಚಾಗಿ ವಿಕಾಸಗೊಂಡಿಲ್ಲವೇ? ಇದನ್ನು ಅರಿ ಯದೇ ಹೋದರೆ ಮನುಷ್ಯನೂ ಕಲ್ಲಿನಂತೆಯೇ ಅಚೇತನನೂ ಜಡನೂ ಆಗಲಿಲ್ಲವೇ?

ಕಲ್ಲುಗುಂಡಿನಮೇಲೆ ಮಲ್ಲಿಗೆಯ ಅರಳಿಕ್ಕಿ
ನಿಲ್ಲದೆ ಪಣೆಯ ಬಡಿವರ್ಗೆ ಬುಗುಟಲ್ಲ
ದಿಲ್ಲ ಕಾಣಯ್ಯ ಸರ್ವಜ್ಞ ॥

ಇದು ನಿಜವಾದ ಪೂಜೆಯಲ್ಲ; ಬರಿಯ ಕಾಯಕ್ಲೇಶ. ಪೂಜೆಯ ಫಲ ಜ್ಞಾನ. ಅದೇ ಪರಮ ಪುರುಷಾರ್ಥ:

ಏನಾದಡೇನಯ್ಯ ತಾನಾಗದಿರುವನಕ
ತಾನಾಗಿ ತನ್ನ ನರಿದಿಪ್ಪ ಜ್ಞಾನಿಯು
ಏನಾದಡೇನು ಸರ್ವಜ್ಞ ॥

ಹೀಗೆ ಜ್ಞಾನಸ್ವರೂಪಿಯಾದ ಪರಾತ್ಪರ ವಸ್ತುವೇ ಪರಮ ಲಕ್ಷ್ಯವಾದರೂ ಅದು ಎಲ್ಲರಿಗೂ ತಟ್ಟನೆ ಲಭಿಸುವುದಿಲ್ಲ; ಅದಕ್ಕೆ ಭಕ್ತಿ ಬೇಕು; ಆ ಭಕ್ತಿಯಲ್ಲಿ ಶ್ರದ್ಧೆಯೂ ನಿಷ್ಠೆಯೂ ಇರಬೇಕು; ಅಂಥ ದೃಢಭಕ್ತಿಯಿಂದಲೇ ಗುರಿಯನ್ನು ಗೆಲ್ಲು ವುದು ಸಾಧ್ಯ. ಚಿತ್ತೈಕಾಗ್ರತೆಯನ್ನೂ ಚಿತ್ತಶುದ್ಧಿಯನ್ನೂ ತಾರದ ನಿರರ್ಥಕವಾದ ಬಾಹ್ಯಾಚಾರಗಳಿಂದ ಎಳ್ಳಷ್ಟೂ ಪ್ರಯೋಜನವಿಲ್ಲ; ಅಂಥ ಪೂಜೆಪುರಸ್ಕಾರಗಳೂ ಜಪತಪಗಳೂ

ಪ್ರದಕ್ಷಿಣ ನಮಸ್ಕಾರಗಳೂ ವ್ಯರ್ಥ—

ಚಿತ್ತವಿಲ್ಲದೆ ಗುಡಿಯ ಸುತ್ತಿದಡೆ ಫಲವೇನು
ಎತ್ತು ಗಾಣವನು ಹೊತ್ತು ತಾ ನಿತ್ಯದಿ
ಸುತ್ತಿ ಬಂದಂತೆ ಸರ್ವಜ್ಞ ‖

ಬತ್ತಿ ಹೆತ್ತುಪ್ಪವನು ಹತ್ತಿಸಿದ ಫಲವೇನು
ನಿತ್ಯನೆಲೆಗೊಳದೆ ಭಜಿಸುವಾ ಪೂಜೆಯು
ಹತ್ತಿಗೇಡೆಂದ ಸರ್ವಜ್ಞ ‖

ಇದರಿಂದ ಅಜ್ಞಾನಾಂಧಕಾರ ಹೋಗುವುದಿಲ್ಲ. ಅದಕ್ಕೆ ಬೇರೆ ವಿಧವಾದ ದೀಪ ಹೊತ್ತಿಸಬೇಕು—

ಧ್ಯಾನದಾ ಹೊಸಬತ್ತಿ ಮೌನದಾ ತಿಳಿದುಪ್ಪ
ಸ್ವಾನುಭವವೆಂಬ ಬೆಳಗಿನಾ ಜ್ಯೋತಿಯು-
ಜ್ಞಾನವಂ ಸುಡುಗು ಸರ್ವಜ್ಞ ‖

ಎಣಿಸುತಿರ್ಪುದು ಬೆರಳು ಗುಣಿಸುತಿರ್ಪುದು ಜಿಹ್ವೆ
ಮನ ಹೋಗಿ ಹಲವ ನೆನೆವರೆ ಹಾಳೂರ
ಶುನಕನಂತಕ್ಕು ಸರ್ವಜ್ಞ ‖

ಅಂತರ್ಮುಖಿಯಾಗಿ, ಧ್ಯಾನಶೀಲನಾಗಿ, ಮಾನಸಪೂಜೆ ಮಾಡುವವನು ಮನೆಯಲ್ಲಿಯೇ ಇದ್ದು ಮಠವಾಸಿಗಳಿಗಿಂತ ಉತ್ತಮ ಫಲವನ್ನು ಪಡೆಯಬಹುದು ; ಹಾಗಿಲ್ಲದವನು ದೇವರ ಪೂಜಾರಿಯಾಗಿದ್ದು ಸದಾ ದೇವಾಲಯದಲ್ಲಿಯೇ ಸೇರಿಕೊಂಡಿದ್ದರೂ ಏನೂ ಪ್ರಯೋಜನವಿಲ್ಲ—

ಮನದಲ್ಲಿ ನೆನೆವಂಗೆ ಮನೆಯೇನು ಮಠವೇನು ?
ಮನದಲ್ಲಿ ನೆನೆಯದಿರುವವನು ದೇಗುಲದ
ಕೊನೆಯಲಿದ್ದೇನು ಸರ್ವಜ್ಞ ‖

ಪಾರಮಾರ್ಥಿಕವು ಕೇವಲ ಕೆಲವು ಬಾಹ್ಯಾಚಾರಗಳಿಂದ ಪಡೆಯುವಷ್ಟು ಸುಲಭವಲ್ಲ—

ಮಟ್ಟಿ ಶ್ರೀಗಂಧವನು ಇಟ್ಟು ತಾ ನೊಸಲೊಳಗೆ
ನೆಟ್ಟನೆ ಸ್ವರ್ಗಪಡೆವಡೆ ಸಾಣೆಕಲ್
ಕೆಟ್ಟ ಕೇಡೇನು ಸರ್ವಜ್ಞ ॥

ನಿತ್ಯ ನೀರ್ಮುಳುಗುವನು ಹತ್ತಿದಡೆ ಸ್ವರ್ಗವನು
ಎತ್ತಿ ಜನ್ಮವನು ಜಲದಿಪ್ಪ ಕಪ್ಪೆಯು
ಹತ್ತದೇಕೆಂದ ಸರ್ವಜ್ಞ ॥

ಸುಟ್ಟ ಬೂದಿಯ ತಂದು ದಟ್ಟವಾಗಿಯೆ ಬಡಿದು
ಶ್ರೇಷ್ಠಸ್ವರ್ಗವನು ಅಡರುವಡೆ ಕತ್ತೆ ತಾ
ಕೆಟ್ಟ ಕೇಡೇನು ಸರ್ವಜ್ಞ ॥

ದೊಡ್ಡದಾಗಿ ಗಂಧಾಕ್ಷತೆಗಳನ್ನೂ ವಿಭೂತಿಯ ಪಟ್ಟೆಗಳನ್ನೂ ನಾಮ ಮುದ್ರೆಗಳನ್ನೂ ಧರಿಸಿದರೆ ಅಷ್ಟುಮಾತ್ರದಿಂದ ತಾವು ವೈದಿಕರೆಂದೂ ಆಚಾರವಂತರೆಂದೂ ದೇವರಿಗೆ ಮೆಚ್ಚುಗೆ ಯಾದವರೆಂದೂ ಯಾರೂ ತಿಳಿದುಕೊಳ್ಳದಿರಲಿ:

ಖಂಡಿಸದೆ ಕರಣವನು ದಂಡಿಸದೆ ದೇಹವನು
ಉಂಡುಂಡು ಸ್ವರ್ಗಕಯ್ದಲ್ಕೆ ಅದನೇನು
ರಂಡೆಯಾಳುವಳೆ ಸರ್ವಜ್ಞ ॥

ಈ ವಿಧವಾದ ಭ್ರಾಂತಿಯುಳ್ಳ ಜನರು ಎಲ್ಲಾ ದೇಶದಲ್ಲಿಯೂ ಎಲ್ಲಾ ಕಾಲದಲ್ಲಿಯೂ ಇರುತ್ತಾರೆ. ಇದರ ಫಲ ಅವರಿಗೆ ಅಹಂಕಾರ; ಅವರನ್ನು ನೋಡಿ ಬೆರಗಾಗುವ ಅರಿಯದ ಜನಕ್ಕೆ ಅಜ್ಞಾನ. ಹೀಗೆ, ತತ್ವವನ್ನು ಅರಿಯದೆ, ತಾವೂ ಭ್ರಾಂ

ತರಾಗಿ ಇತರರನ್ನೂ ಮರುಳು ಮಾಡುವವರನ್ನು ಸರ್ವಜ್ಞನು ಕತ್ತೆಗೂ ಮರಕ್ಕೂ ಹೋಲಿಸಿ ಕಠಿಣವಾಗಿ ಖಂಡಿಸಿದ್ದಾನೆ.

ಕತ್ತೆ ಬೂದಿಲಿ ಹೊರಳಿ ಮತ್ತೆ ಯತಿಯಪ್ಪುದೇ
ತತ್ವವಱಿಯದಲೆ ಭಸಿತವಿಟ್ಟವ ಶುದ್ಧ
ಕತ್ತೆಯಂತೆಂದ ಸರ್ವಜ್ಞ ||

ಅತ್ತಿಮರ ತಾ ಕಾಯ ಹೊತ್ತಿರ್ದ ತೆಱದಂತೆ
ತತ್ವಭೇದವನು ಅಱಿಯದೆಯೆ ರುದ್ರಾಕ್ಷಿ
ಹೊತ್ತು ಫಲವೇನು ಸರ್ವಜ್ಞ ||

ತತ್ವಜ್ಞಾನದ ಕಡೆಗೆ ಲಕ್ಷ್ಯಕೊಡದೆ ಈ ಬಾಹ್ಯಚಿಹ್ನೆಗಳನ್ನೇ ದೊಡ್ಡದಾಗಿ ಭಾವಿಸಿಕೊಳ್ಳುವುದು ಕುರಿಯು ಕಬ್ಬಿನ ಸೋಗೆಯನ್ನು ತಿನ್ನುವಂತೆ—

ಕುಱಿ ಕಬ್ಬಿನೊಳಹೊಕ್ಕು ಅಱಿವುದೇ ತನಿರಸವ
ಹೊಱಗಣ ಸೋಗೆಯುಗಿವಂತೆ ; ಜ್ಞಾನವ
ಕುಱುಹು ಬೇಱೆಂದ ಸರ್ವಜ್ಞ ||

ಹೀಗೆ ತತ್ವವನ್ನರಿಯದವನು ನಾಯಿ, ಎತ್ತು, ಕುರಿ ಮುಂತಾದ ಪಶುಪ್ರಾಣಿಗಳಿಗೆ ಸಮಾನ. ಮನುಷ್ಯನಾದದ್ದಕ್ಕೆ ಜ್ಞಾನಮಾರ್ಗವನ್ನು ಹಿಡಿಯಬೇಕು; ಸಾತ್ವಿಕನಾಗಿ ಸತ್ಯಾಸತ್ಯ ವಿಚಾರ ಮಾಡಬೇಕು.

ಜ್ಞಾನಿಯಾದವನಿಗೆ ಡಂಭ ಡಬಡ್ಡಾಳಿಕೆಗಳಿರುವುದಿಲ್ಲ. ಅವನ ವೇಷಭೂಷ ನಡೆನುಡಿಗಳು ವಿಲಕ್ಷಣವಾಗಿರಬಹುದು.—

ಮಂಡೆಬೋಳಿಸಿಕೊಂಡು ತುಂಡುಗಂಬಳಿಹೊದೆದು
ಹಿಂಡನಗಲಿದ ಗಜದಂತೆ ಇಪ್ಪವರ
ಕಂಡು ನಂಬುವುದು ಸರ್ವಜ್ಞ ||

ಹೀಗೆಂದು,

ಮುಂಡೆಬೋಳಾದವರ ಕಂಡು ನಂಬಲಿಬೇಡ
ಖಂಡಿತಮಪ್ಪ ಪರತತ್ವ ವಿಷಯವನು
ಕಂಡು ನಂಬುವುದು ಸರ್ವಜ್ಞ ||

ತತ್ವವನ್ನು ಅರಿದರೆ ಇದೊಂದೂ ಬೇಡ—

ಸತ್ಯನೇಮಗಳೇಕೆ ಮತ್ತೆ ಪೂಜೆಗಳೇಕೆ
ನೆತ್ತಿ ಬೋಳೇಕೆ ಜಡೆಯೇಕೆ ವದನದಿ
ಸತ್ಯವುಳ್ಳವಗೆ ಸರ್ವಜ್ಞ ||

ಅಂಥವನು ಬ್ರಹ್ಮದ ವಿಚಾರವನ್ನು ಕುರಿತು ಮಾತನಾಡ ಹೋಗುವುದಿಲ್ಲ. ಬಾಯಿಬಿಟ್ಟರೆ ಬಂಡಗೇಡು.

ಮಾತಿನಾ ಬೊಮ್ಮವೂ ತೂತಾದ ಮಡಕೆಯೂ
ಪಾತಕದ ನೆರೆಯು ಇವು ಮೂರು ಲೋಕದೊ
ಳೇತಕ್ಕು ಬೇಡ ಸರ್ವಜ್ಞ ||

ಬೊಮ್ಮವನು ಅರಿದಿಹರೆ ಸುಮ್ಮನೇ ಇರಬೇಕು
ಬೊಮ್ಮವನರಿದು ಉಸುರಿದರೆ ಕಳಹೋಗಿ
ಕೆಮ್ಮಿದಂತಕ್ಕು ಸರ್ವಜ್ಞ ||

ತಾನು ಜ್ಞಾನಿ, ಪಂಡಿತ; ಎಲ್ಲರೂ ತನ್ನಲ್ಲಿಗೆ ಬರಬೇಕು, ಶಿಷ್ಯರಾಗಬೇಕು, ತಾನು ಎಲ್ಲರನ್ನೂ ಉದ್ಧಾರ ಮಾಡುತ್ತೇನೆ ಎಂದು ಅವನು ಕೂಗಿ ಕರೆಯುವುದಿಲ್ಲ, ಪ್ರಕಟನೆಗಳನ್ನು ಹೊರ ಡಿಸುವುದಿಲ್ಲ—

ಬಲ್ಲೆನೆಂಬುವ ಮಾತು ಎಲ್ಲವೂ ಹುಸಿ ಕಾಣೊ
ಬಲ್ಲರೆ ಬಲ್ಲೆನೆನಬೇಡ ಸುಮ್ಮನಿರ
ಬಲ್ಲವನೆ ಬಲ್ಲ ಸರ್ವಜ್ಞ ||

ತನ್ನ ನೋಡಲಿ ಎಂದು ಕನ್ನಡಿಯು ಕರೆವುದೇ ?
ತನ್ನಲಿ ಜ್ಞಾನವುದಿಸಿದ ಮಹಾತ್ಮನು
ಕನ್ನಡಿಯಂತೆ ಸರ್ವಜ್ಞ ॥

ಅವನಿಗೆ ಸರ್ವಸಮತೆ ಇರುತ್ತದೆ—

ಎಂಜಲವು ಹೊಲೆಯಿಲ್ಲ ಸಂಜೆಬೆಳಗುಗಳಿಲ್ಲ
ಅಂಜಿಕೆಯಿಲ್ಲ ಭಯವಿಲ್ಲ ಜ್ಞಾನವೆಂ
ಬಂಜನವಿರಲು ಸರ್ವಜ್ಞ ॥

ಅವನು ಜಾತಿಭೇದ ಮಾಡನು—

ಕೋತಿಗೆ ಗುಣವಿಲ್ಲ ಮಾತಿಗೆ ಕೊನೆಯಿಲ್ಲ
ಸೋತುಹೋದವಗೆ ಸುಖವಿಲ್ಲ; ಅರಿದವಗೆ
ಜಾತಿಯೇ ಇಲ್ಲ ಸರ್ವಜ್ಞ ॥

ಅವನಿಗೆ ಯಾರ ಹೆದರಿಕೆಯೂ ಇರುವುದಿಲ್ಲ ; ಯಾರ ಬೈಗಳೂ ತಟ್ಟುವುದಿಲ್ಲ—

ಆನೆ ಸೀರಾಟದಲಿ ಶ್ವಾನ ಕಂಡಂಜುವುದೆ ?
ಹೀನಮಾನವರ ಬಿರುನುಡಿಗೆ ತತ್ವದ
ಜ್ಞಾನಿಯಂಜುವನೆ ಸರ್ವಜ್ಞ ॥

ಅವನು ಸಂಸಾರದಲ್ಲಿದ್ದರೂ ಸಂಸಾರಿಯಾಗುವುದಿಲ್ಲ—

ಮುತ್ತು ನೀರೊಳು ಹುಟ್ಟಿ ಮತ್ತೆ ನೀರಪ್ಪುದೇ
ಸತ್ಯವನರಿದ ಜ್ಞಾನಿ ಸಂಸಾರವ
ಮತ್ತೆ ಹೊದ್ದುವನೆ ? ಸರ್ವಜ್ಞ ॥

ಅವನು ಎಂತಿರಲಿ, ಎಲ್ಲಿರಲಿ, ತಪ್ಪುದಾರಿಗೆ ಹೋಗುವುದಿಲ್ಲ—

ನೆತ್ತದಾ ಹಾಸಂಗಿ ಎತ್ತ ಬಿದ್ದರು ದಾಯು
ತತ್ವದ ನೆಲೆಯನರಿ ದಾತನೊಲಿಸು ತಾ-
ನೆತ್ತಿರ್ದಡೇನು ಸರ್ವಜ್ಞ ||

ಜ್ಞಾನಿ ಸಂಸಾರದೊಳು ತಾನಿರಲು ತಿಳಿದಿಹನು
ಭಾನು ನೋಡದಲಿ ಹೊಳೆವಂತೆ ಸಪಮಲ
ಸ್ಥಾನದೊಳಿಹನು ಸರ್ವಜ್ಞ ||

# ೫. ಶಮದಮಾದಿ ಸಂಪತ್ತಿ

ಹೀಗೆ ನಿಜವಾದ ಭಕ್ತಿಯೂ ಆ ಮೂಲಕ ಜ್ಞಾನವೂ ಬರಬೇಕಾದರೆ ಮನುಷ್ಯನು ಶುದ್ಧಜೀವಿಯಾಗಬೇಕು. ಕಾಮ ಕ್ರೋಧಾದಿಗಳನ್ನು ಬಿಡಬೇಕು.

ಕೋಪವೆಂಬುದು ಕೇಳಿ ಪಾಪದ ನೆಲೆಗಟ್ಟು
ಕೂಪದೊಳು ನೇಣು ಹರಿದಂತೆ ನರಕದಿ
ಕೋಪಿ ತಾನಿಳಿವ ಸರ್ವಜ್ಞ ||

ಕೋಪದಿಂದ ತುಂಬಿದವನ ದೇಹ ಹಾವು ಅಡಗಿಕೊಂಡಿರುವ ಹುತ್ತದ ಹಾಗೆ; ಅವನ ಬಾಯಿಂದ ನಾಲಗೆಯು ವಿಷದ ಮಾತುಗಳನ್ನು ಸುರಿಸುತ್ತದೆ. ಅಂಥ ಸಮಯದಲ್ಲಿ ಸಮಸ್ಥಿತಿಯನ್ನು ಪಡೆಯಲು ಅಭ್ಯಾಸಮಾಡಬೇಕು.

ಒಡಲೆಂಬ ಹುತ್ತಕ್ಕೆ ನುಡಿವ ನಾಲಗೆ ಸರ್ಪ
ಕಡುರೋಷವೆಂಬ ವಿಷವೇರಿ ಸಮತೆ ಗಾ
ರುಡಿಗನಂತಕ್ಕು ಸರ್ವಜ್ಞ ||

ಹಸಿವ ಕೊಂದಾತಂಗೆ ಪಶುವಧೆಯು ಮಾಡದಗೆ
ಹುಸಿ ಕರ್ಮ ಕಾಮವಳಿದವಗೆ ಇಹಪರದಿ
ಶಶಿಧರನೊಲಿವ ಸರ್ವಜ್ಞ ||

ಆದರೆ ಇವನ್ನು ಗೆಲ್ಲುವುದು ಕಷ್ಟ; ದೇಹವನ್ನು ದಂಡಿಸಿ ದರೆ ಇವು ತಗ್ಗುವುದಿಲ್ಲ.

> ಒಡಲ ದಂಡಿಸಿ ಮುಕ್ತಿ ಪಡೆವೆನೆಂಬವ ಹೆಡ್ಡ
> ಬಡಿಗೆಯಲಿ ಹುತ್ತ ಹೊಡೆಯಲಡಗಿಹ ಸರ್ಪ
> ಮಡಿಯುವುದೆ ಹೇಳು ಸರ್ವಜ್ಞ ||

ವೇದ ಶಾಸ್ತ್ರ ಮುಂತಾದವುಗಳನ್ನೆಲ್ಲಾ ಓದುವುದರ ಉದ್ದೇಶವೇ ಇದು: ಕಾಮಕ್ರೋಧಗಳನ್ನು ತ್ಯಜಿಸಿ ಮನಶ್ಶಾಂತಿ ಪಡೆಯುವುದು.—

> ವೇದಶಾಸ್ತ್ರಗಳನೋದಿದೊಡೆ ಫಲವೇನು
> ವೇದಿಸುವ ಚಿತ್ತ ಸಮರಸವಿಲ್ಲದೊಡೆ
> ಬೂದಿಯಲಿ ಹೋಮ ಸರ್ವಜ್ಞ ||

ಆದ್ದರಿಂದ ವೇದಾಂತ ಓದಿ, ಸಂನ್ಯಾಸ ಪಡೆದು, ಮನೆಮಠಗಳನ್ನು ತೊರೆದು ಹೊರಟುಹೋಗುವವನಿಗಿಂತಲೂ, ಕಾಮಕ್ರೋಧಗಳನ್ನು ಬಿಟ್ಟು ಸಂಯಮ ಪಡೆದವನೇ ಹೆಚ್ಚಿನವನಾಗುತ್ತಾನೆ.

> ಓದಿ ಬೂದಿಯ ಪೂಸಿ ತೇದು ಕಾವಿಯ ಹೊದೆದು
> ಹೋದಾತ ಯೋಗಿಯೆನಬೇಡ; ಇಂದ್ರಿಯವ
> ಕಾದಾತ ಯೋಗಿ, ಸರ್ವಜ್ಞ ||

## ೬. ವಿಧಿ-ಕರ್ಮ

ಮನುಷ್ಯನು ದುರಹಂಕಾರ ಪಡಬಾರದು; ತನಗಿಂತ ಮೀರಿದ ಶಕ್ತಿ ಮತ್ತೊಂದು ಇದೆ ಎಂಬುದನ್ನು ಅರಿತು ವಿನಯದಿಂದ ನಡೆಯಬೇಕು. ಏಕೆಂದರೆ ಎಂಥೆಂಥ ಶೂರರೋ, ದೇವಾಧಿದೇವತೆಗಳೋ, ತಮ್ಮ ಮನಸ್ಸಿಗೆ ಬಂದಂತೆ ನಡೆಯಲಾಗ

ಲಿಲ್ಲ. ಕಷ್ಟನಿಷ್ಠುರಗಳನ್ನು ತಡೆಯಲಾಗಲಿಲ್ಲ. ರಾಮಾಯಣ ಭಾರತ, ಪುರಾಣ, ಪುಣ್ಯಕಥೆ, ಇವುಗಳಿಂದ ಇದು ಸ್ಪಷ್ಟ ವಾಗುತ್ತದೆ—

ಪುಡಿಯಾದನಂಗಜನು ಹಿಡಿವಡೆದ ಹನುಮಂತ
ಪೊಡವಿಗೀಶ್ವರನು ತಿರಿದುಂಡನುಳಿದರ
ಸಡಗರವೇನು ? ಸರ್ವಜ್ಞ ||

ಹೆತ್ತಾತನರ್ಜುನನು ಮುತ್ತಯ್ಯ ದೇವೇಂದ್ರ
ಮತ್ತೆ ಮಾತುಲನು ಹರಿಯಿರಲಭಿಮನ್ಯು
ಸತ್ತನೇಕಯ್ಯ ಸರ್ವಜ್ಞ ||

ವಿಧಿಯ ವಿಲಾಸವು ಯಾರಿಗೂ ತಿಳಿಯದು. ಒಳ್ಳೆಯದು ಬರುವಾಗಲೂ ಹಾಗೆಯೇ; ಕೆಟ್ಟದು ಬರುವಾಗಲೂ ಹಾಗೆಯೇ—

ಏನಾನು ನೆವದಿಂದ ತಾನೆ ಬಪ್ಪುದು ಸಿರಿಯು
ಕಾನನದೊಳಗೆ ಕರಿ ಹುಟ್ಟಿ ಪಟ್ಟಕ್ಕೆ
ತಾನೆ ಬಂದಂತೆ ಸರ್ವಜ್ಞ ||

ಏನಾನು ನೆವನದಲಿ ತಾನೆ ಪೋಪುದು ಸಿರಿಯು
ಕಾನನದೊಳಗೆ ಕಿಡಿ ಹುಟ್ಟಿ, ಕಾಡೆಲ್ಲ
ತಾನೆ ಬೆಂದಂತೆ ಸರ್ವಜ್ಞ ||

ಅದೃಷ್ಟವು ಅನುಕೂಲವಾಗಿದ್ದಾಗ ಮುಟ್ಟಿದ್ದೆಲ್ಲ ಹೊನ್ನಾಗುತ್ತದೆ; ಆಗ, ನಾನು ಮಾಡಿದೆ, ನನ್ನ ಸಮಾನವಿಲ್ಲ ಎಂದುಕೊಳ್ಳುತ್ತೇವೆ—

ಮೂಟೆಗಟ್ಟಿರಾಟಿಕ್ಕು ಆಟು ಹನ್ನೆರಡಕ್ಕು
ಹೇಟುವ ಗೊಡ್ಡು ಹೈನಕ್ಕು ಕರ್ಮ ತಾ
ಹಾಟುವಾ ದಿನಕೆ ಸರ್ವಜ್ಞ ||

ಇಂಗು ಕರ್ಪುರವಕ್ಕು ಬಿಂಗು ಬಜ್ಜರವಕ್ಕು
ಅಂಗಳದ ಶಿಲೆಯು ಹೊನ್ನಕ್ಕು ಕರ್ಮವು
ಹಿಂಗುವಾ ದಿನಕೆ ಸರ್ವಜ್ಞ ||

ದೈವವು ಪ್ರತಿಕೂಲವಾದರೆ ಮುಟ್ಟಿದ್ದೆಲ್ಲಾ ಮಣ್ಣಾಗುವುದು ; ನಮ್ಮ ಅಸಹಾಯತೆ ಗೋಚರವಾಗುವುದು; ದೇವರನ್ನು ಬಯ್ಯುವೆವು—

ಎಂಟೆಟ್ಟರೆರಡಕ್ಕು ನೆಂಟರೂ ಹಗೆಯಕ್ಕು
ದಂಟುಗಳೆದ್ದು ಹಾವಕ್ಕು ಕರ್ಮ ತಾ
ನಂಟುವಾ ದಿನಕೆ ಸರ್ವಜ್ಞ ||

ಅದನ್ನು ನಾವು ಮೀರುವಂತಿಲ್ಲ, ಮರೆಸುವಂತಿಲ್ಲ, ಮೋಸಪಡಿಸುವಂತಿಲ್ಲ ; ಅದು ನಾವು ಇರುವ ಕಡೆಗೇ ಹುಡುಕಿಕೊಂಡು ಬರುತ್ತದೆ. ಬೇಡವೆಂದರೂ ಬಿಡದೆ ತನ್ನ ಕೆಲಸಮಾಡಿ ಹೋಗುತ್ತದೆ—

ಆಡುವಾ ಮಕ್ಕಳಿಗೆ ಊಡುವಾ ತಾಯಂತೆ
ಮಾಡಿದ ಕರ್ಮ ಬಳಿವಿಡಿದು, ಪಿಡಿದಂತು
ಊಡುತ್ತಲಿಹುದು, ಸರ್ವಜ್ಞ ||

ದೈವವು ನಮ್ಮ ಕರ್ಮಾಧೀನ ; ಆದ್ದರಿಂದ ದೈವ ಒದಗಿಸಿದ ನಮ್ಮ ಕರ್ಮಫಲವನ್ನು ನಾವು ತಾಳ್ಮೆಯಿಂದ ಅನುಭವಿಸಬೇಕು; ಸನ್ಮಾರ್ಗದಲ್ಲಿ ನಡೆಯುತ್ತ ಹೋಗಬೇಕು——

ಅಂತಿಕ್ಕು ಇಂತಿಕ್ಕು ಎಂತಿಕ್ಕು ಎನಬೇಡ
ಚಿಂತಿಸಿ ದೇಹ ಬಡವಕ್ಕು; ಶಿವ ತೋಟಿ
ದಂತಿಹುವೆ ಲೇಸು ಸರ್ವಜ್ಞ ||

# ೭. ಧರ್ಮಗಳು-ಮತಗಳು

ಸರ್ವಜ್ಞನಿಗೆ ಅವರು ಇವರು ಎಂಬ ಭೇದವಿಲ್ಲ; ನಿಷ್ಕಾರಣವಾದ ದ್ವೇಷವಾಗಲಿ ಅಭಿಮಾನವಾಗಲಿ ಇಲ್ಲ; ಅವನು ಮೆಚ್ಚುವುದು ಗುಣ, ದ್ವೇಷಿಸುವುದು ದೋಷ. ಆದ್ದರಿಂದ ವೀರಶೈವರೆಂದು ಅವರ ಹುಳುಕನ್ನು ಮುಚ್ಚಿಲ್ಲ, ಅನ್ಯಮತೀಯರೆಂದು ಜೈನರ, ಬ್ರಾಹ್ಮಣರ, ಗುಣಗಳನ್ನು ಕಡೆಗಣಿಸಿಲ್ಲ. ನಿಜವಾದ ನೀತಿಬೋಧಕನ ದೃಷ್ಟಿಯೇ ಇದು, ದಾರಿಯೇ ಇದು. ಸದಾಚಾರ ಸತ್ಪ್ರವೃತ್ತಿಗಳಿಲ್ಲದವರು ಬರಿಯ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿದ್ದರಿಂದಲೇ ಹೇಗೆ ಭಕ್ತರಾಗುವುದಿಲ್ಲವೆಂಬುದನ್ನು ಅನೇಕ ಕಡೆ ಅನೇಕ ವಿಧವಾಗಿ ಹೇಳಿದ್ದಾನೆ. ಅದನ್ನು ಹಿಂದೆ ನೋಡಿದ್ದೇವೆ. ಹೀಗೆ ಜೈನರನ್ನೂ, ಬ್ರಾಹ್ಮಣರನ್ನೂ, ಅವರ ಲೋಪದೋಷಗಳನ್ನು ಹಿಡಿದು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾನೆ. ಜೊತೆಗೆ ಅವರ ಗುಣಗಳನ್ನೂ ನಿಷ್ಪಕ್ಷಪಾತವಾಗಿ ಬಾಯಿತುಂಬ ಹೊಗಳಿದ್ದಾನೆ.

ಮಾತನಱಿದಾ ಸುತನು ರೀತಿಯಱಿದಾ ಸತಿಯು
ನೀತಿಯನ್ನಱಿದ ವಿಪ್ರನು ಜಗದೊಳು
ಜೋತಿಯಿದ್ದಂತೆ ಸರ್ವಜ್ಞ ||

ಧರ್ಮದ ತಿರುಳು ವೇದ ಓದುವುದಲ್ಲ, ಮತಾಚರಣೆ ಸಂಪ್ರದಾಯಾನುವರ್ತನೆಗಳಲ್ಲ; ಅನುಕಂಪೆ, ಅಹಿಂಸೆ; ಇವೇ ಉತ್ತಮರ ಗುರುತು—

ಉತ್ತಮದ ವರ್ಣಗಳನುತ್ತಮರೆನಬೇಡ
ಮತ್ತೆ ತನ್ನಂತೆ ಬಗೆವರನೆಲ್ಲರ
ನುತ್ತಮರೆನ್ನು ಸರ್ವಜ್ಞ ||

ಪ್ರಾಣಿಹಿಂಸೆಯಾಗುವ ಯಜ್ಞಯಾಗಾದಿಗಳನ್ನೂ ಅವನ್ನು ಮಾಡುವ ವಿಪ್ರರನ್ನೂ ಅವನಿಗೆ ಕಂಡರಾಗದು. ಪ್ರಾಣಿಗಳನ್ನು ಕೊಂದು ಮಾಡುವ ಭಕ್ತಿ ಎಂಥ ಭಕ್ತಿ?

ಕೊಂದು ಮಾಡುವ ಭಕ್ತಿಯಿಂದವನು ಅನೊರಿವೆ
ಗಂಧದ ಮರನ ನೆಱೆ ಸುಟ್ಟು ಇದ್ದಿಲನು
ತಂದು ಬಡಿದಂತೆ ಸರ್ವಜ್ಞ ||

ಪ್ರಾಣಿಹಿಂಸೆ ಮಾಡುವವನು ಹೊಲೆಯನಿಗಿಂತ ಕೀಳು.—

ಸತ್ತುದನು ತಿಂಬಾತ ಎತ್ತಣದ ಹೊಲೆಯನು
ಒತ್ತಿ ಜೀವವನು ಕೊಱೆಕೊಱೆದು ತಿಂಬಾತ
ನುತ್ತಮದ ಹೊಲೆಯ ಸರ್ವಜ್ಞ ||

ಯಜ್ಞದಲ್ಲಿ ಪಶುವನ್ನು ಹೇಗೆ ಕೊಲ್ಲುತ್ತಾರೆಂಬುವನ್ನು ಬಲ್ಲವರಿಗೆ ಈ ಮಾತು ಕಠಿಣವಾಗಿ ಕಾಣುವುದಿಲ್ಲ. ಜೈನರಲ್ಲಿ ಪ್ರಾಣಿಹಿಂಸೆಯು ನಿಷಿದ್ಧ; ಅಹಿಂಸೆಯೇ ಅವರಿಗೆ ಪರಮ ಧರ್ಮ; ಆದ್ದರಿಂದ ಅವನಿಗೆ ಜೈನ ಧರ್ಮದಲ್ಲಿ ಪೂಜ್ಯತೆ—

ಕೊಲುವ ಧರ್ಮವನೊಯ್ದು ಒಲೆಯೊಳಗೆ ಇಕ್ಕುವಾ
ಕೊಲಲಾಗದೆಂಬ ಜೈನನ ಮತವೆನ್ನ
ತಲೆಯಮೇಲಿರಲಿ ಸರ್ವಜ್ಞ ||

ಮನುಷ್ಯನ ಕೀಳು ಮೇಲುಗಳು, ಆ ಜಾತಿ ಈ ಜಾತಿ, ಆ ಧರ್ಮ ಈ ಧರ್ಮ, ಎಂಬವುಗಳ ಮೇಲೆ ನಿಷ್ಕರ್ಷೆಯಾಗತಕ್ಕವುಗಳಲ್ಲ. ಯಾರು ತನ್ನ ಆತ್ಮಗುಣಗಳಿಂದ ದೇವರಿಗೆ ಮೆಚ್ಚುಗೆಯಾಗುವ ರೀತಿಯಲ್ಲಿ ನಡೆದುಕೊಳ್ಳುತ್ತಾನೋ ಅವನೇ ಮೇಲು, ಅವನೇ ಜಾತಿವಂತ —

ಜಾತಿಹೀನರ ಮನೆಯು ಜ್ಯೋತಿ ತಾ ಹೀನವೇ
ಜಾತಿವಿಜಾತಿಯೆನಬೇಡ ದೇವನೊಲಿ
ದಾತನೇ ಜಾತ ಸರ್ವಜ್ಞ ||

ಆಳ್ವಾರುಗಳಲ್ಲಿಯೂ ನಾಯನಾರುಗಳಲ್ಲಿಯೂ ಎಷ್ಟೋ ಜನ ಕೀಳು ಜಾತಿಯಲ್ಲಿ ಹುಟ್ಟಿ ಮುಕ್ತಿ ಹೊಂದಲಿಲ್ಲವೇ? ಕುಲ ಭೇದವನ್ನು ನೋಡುವವರು ಮನುಷ್ಯರು; ದೇವರು ಅದನ್ನು ನೋಡುವುದಿಲ್ಲ; ಅವನು ನೋಡುವುದು ಶುದ್ಧಸತ್ವವನ್ನು—

ಎಲುವಿಲ್ಲ ನಾಲಗೆಗೆ ಜಲವಿಲ್ಲ ಜಡವಂಗೆ
ತೊಲೆಕಂಬವಿಲ್ಲ ಗಗನಕ್ಕೆ; ದೇವರಲಿ
ಕುಲಭೇದವಿಲ್ಲ ಸರ್ವಜ್ಞ ||

# ೮. ಸಜ್ಜನರು-ದುರ್ಜನರು: ಅವರ ಸಹವಾಸ

ಮನುಷ್ಯರು ಅವರವರ ಪೂರ್ವಕರ್ಮಾನುಸಾರವಾಗಿ ಈ ಜನ್ಮದಲ್ಲಿ ಬೇರೆ ಬೇರೆ ಗುಣಾವಗುಣಗಳೊಂದಿಗೆ ಹುಟ್ಟುವರು. ವಿವೇಕಿಗಳೂ ವಿದ್ಯಾವಂತರೂ ತಮ್ಮ ಗುಣದೋಷಗಳನ್ನು ತಾವು ಅರಿತು ಉತ್ತಮವಾಗುವುದಕ್ಕೆ ತಕ್ಕ ಪ್ರಯತ್ನ ಮಾಡ ಬೇಕು. ಇದಕ್ಕೆ ಸತ್ಸಹವಾಸವು ಬಹು ಸಹಾಯ ಮಾಡುತ್ತದೆ. ಸಜ್ಜನರ ನಡೆ ನುಡಿ ಸ್ನೇಹಗಳಿಂದ ಮನುಷ್ಯನು ಪರಿಶುದ್ಧನಾ ಗುತ್ತಾನೆ; ತೀರ್ಥಯಾತ್ರೆಗಳನ್ನು ಮಾಡಿದ್ದಕ್ಕಿಂತ ಹೆಚ್ಚಿನ ಫಲ ಸತ್ಸಂಗದಿಂದ ಬರುತ್ತದೆ.—

ಸತ್ಯರಾ ನುಡಿ ತೀರ್ಥ ನಿತ್ಯರಾ ನಡೆ ತೀರ್ಥ
ಉತ್ತಮರ ಸಂಗವದು ತೀರ್ಥ ಹರಿವ ನೀ
ರೆತ್ತಣದು ತೀರ್ಥ ಸರ್ವಜ್ಞ ||

ಕೆಟ್ಟವರ ಜೊತೆ ಸೇರಿದರೆ ಅವರಂತೆ ಆಗುವುದು ಸ್ವಭಾವ :

ಒಳ್ಳಿದರ ಒಡನಾಡಿ ಕಳ್ಳನೊಳ್ಳಿದನಕ್ಕು
ಒಳ್ಳಿದ ಕಳ್ಳರೊಡನಾಡಿ ಆವ ದುಷ್ಟ
ಕಳ್ಳ ತಾನಕ್ಕು ಸರ್ವಜ್ಞ ||

ಆದ್ದರಿಂದ ದುರ್ಜನರ ಸಹವಾಸವನ್ನು ಬಿಡಬೇಕು.

ನೀಚರಾ ನೆರೆಯಿಂದ ಈಚಲದ ಮರ ಲೇಸು
ಈಚಲೊಂದೆಡೆಗೆ ಉಪಕಾರಿ ; ನೀಚನು
ಈಚಲಿಂ ಕಷ್ಟ ಸರ್ವಜ್ಞ ||

ಈಚಲು ಮುಳ್ಳುಗಿಡ; ಅದರ ಮುಳ್ಳು ವಿಷ; ಅದರ ಹತ್ತಿರವಿದ್ದರೆ ಮಾನಗೇಡು—ಹೀಗಿದ್ದರೂ ಅದರಲ್ಲಿ ಗುಣವಿದೆ. ಅದರಿಂದ ಉಪಕಾರವಾಗುತ್ತದೆ. ನೀಚರಿಂದ ಪ್ರಾಣಹಾನಿ ಮಾನಹಾನಿ ಎಲ್ಲಾ ಆಗುತ್ತದೆ. ಉಪಕಾರವೊಂದೂ ಇಲ್ಲ.

ಅವರು ನೋಡುವುದಕ್ಕೆ ಬಹಳ ಸೌಮ್ಯವಾಗಿರುತ್ತಾರೆ. ಸುಂದರವಾಗಿರುತ್ತಾರೆ. ಆದರೆ ಒಳಗೆ ವಿಷ—

ಕೆಂಪು ಫಲದೊಳಗೆಲ್ಲ ಕೆಂಪು ಮೊಕ್ಕೆಯ ಹಣ್ಣು
ಕೆಂಪುಂಟು ಒಳಗೆ ವಿಷವುಂಟು ; ದುರ್ಜನರ
ಇಂಪು ಇಂತೆಂದ ಸರ್ವಜ್ಞ ||

ಆದರೂ ಮನುಷ್ಯರು ನೊಣಗಳಂತೆ; ಒಳ್ಳೆಯದನ್ನು ಕಂಡರೆ ಬೇಸರ; ಕೆಟ್ಟದ್ದನ್ನು ಕಂಡರೆ ಮನಸ್ಸು ಆ ಕಡೆಗೆ ತಾನಾಗಿ ಎಳೆಯುತ್ತದೆ—

ಗಂಧವನು ತೇವಲ್ಲಿ ಒಂದು ನೊಣವನು ಕಾಣೆ
ಸಂಧಿಸಿ ಮಲವ ಬಿಡುವಲ್ಲಿ ನೊಣ ಮುತ್ತು
ವಂದವನು ನೋಡು ಸರ್ವಜ್ಞ ||

ದೇವರು ಲೋಕದಲ್ಲಿ ಸಜ್ಜನರನ್ನು ಸೃಷ್ಟಿಸಿದ ಹಾಗೆಯೇ
ದುರ್ಜನರನ್ನೂ ಸೃಷ್ಟಿಸಿದ್ದಾನೆ- ಮುಳ್ಳುಕಲ್ಲುಗಳಿದ್ದ ಹಾಗೆ.
ಅವರನ್ನು ಬೈದರೆ ಏನು ಪ್ರಯೋಜನ? ಬೈದರೆ ಅವರು
ನಮ್ಮನ್ನು ಬಿಟ್ಟು ಹೋಗುವುದಿಲ್ಲ. ಆದ್ದರಿಂದ ನಾವು ಎಚ್ಚರ
ದಿಂದ, ಉಪಾಯದಿಂದ, ನಡೆದುಕೊಳ್ಳಬೇಕು——

ದಂತಪಂಕ್ತಿಯು ನಡುವೆ ಎಂತಿರ್ಪುದದು ಜಿಹ್ವೆ
ಅಂತು ದುರ್ಜನರ ಬಳಸಿನಲಿ ಸಜ್ಜನನು
ಸಿಂತಿರ್ದ ನೋಡ ಸರ್ವಜ್ಞ ||

ಸಜ್ಜನರು ಮೇಲೆ ನೋಡುವುದಕ್ಕೆ ಹೇಗೆಹೇಗೋ ಇರ
ಬಹುದು. ರೂಪಿನಲ್ಲಿ, ವೇಷಭೂಷಗಳಲ್ಲಿ, ವಕ್ರವಕ್ರವಾಗಿರ
ಬಹುದು. ಆದರೇನು, ಅವರ ಒಳಗು ಒಳ್ಳೆಯದು.-ಬಾಳೆಯ
ಹಣ್ಣು ಡೊಂಕಾದರೆ ಅದರ ಸವಿ ಡೊಂಕೇ? ದುರ್ಜನರು
ಕಜ್ಜಿಯ ಹಾಗೆ; ಮೊದಮೊದಲು ಅದರ ಕೆರೆತ ಹಿತವಾಗಿರು
ತ್ತದೆ. ಆಮೇಲೆ ಬದುಕೇ ವಿಕಾರವಾಗುತ್ತದೆ.

## ೯. ತ್ಯಾಗಬುದ್ಧಿ

ಗುರುಕರುಣದಿಂದಲೋ ಸತ್ಸಹವಾಸದಿಂದಲೋ ಸಾತ್ವಿಕ
ಸ್ವಭಾವದಿಂದಲೋ ಕಾಮಕ್ರೋಧಗಳು ಕಡಮೆಯಾಗುತ್ತ
ಹೋದರೆ, ಮನುಷ್ಯನಲ್ಲಿ ಲೋಕಕಾರುಣ್ಯ ಹುಟ್ಟುತ್ತದೆ. ಸ್ವಾರ್ಥ
ಕಡಮೆಯಾಗುತ್ತದೆ. ಇದಕ್ಕೆ ಹೆಗ್ಗುರುತು ತ್ಯಾಗಬುದ್ಧಿ,

ದಾನ. ಇದು ಹಿಂದೆ ಎಷ್ಟು ಮುಖ್ಯವಾಗಿ ಎಣಿಸಲ್ಪಟ್ಟಿತ್ತೆಂದರೆ, ಈಗ ದಾನ ಧರ್ಮ ಎರಡು ಮಾತುಗಳಿಗೂ ಒಂದೇ ಅರ್ಥ ವಾಗಿಬಿಟ್ಟಿದೆ. ಧರ್ಮದ ಸಾರಸರ್ವಸ್ವ, ತಿರುಳು, ದಾನದಲ್ಲಿದೆ. ದಾನವು ಭಕ್ತಿ ಜ್ಞಾನ ವೈರಾಗ್ಯಗಳಿಗೆ ಸಾಧಕವೂ ಹೌದು, ಸೂಚಕವೂ ಹೌದು. ಲೌಕಿಕವಾಗಿ ನೋಡಿದರೂ, ಸಾಮಾಜಿಕ ರೋಗರುಜಿನಗಳಿಗೆ ದಾನಕ್ಕಿಂತ ಬೇರೆ ಮದ್ದು ಉಂಟೆ? ಎಲ್ಲರೂ ದಯಾಮಯರಾಗಿ, ದಾನಶೀಲರಾಗಿ, ಪರೋಪಕಾರ ಮಾಡುತ್ತ ಹೊರಟರೆ, ಅನ್ಯಾಯ ಅಪಕಾರ ಹೊಟ್ಟೆಕಿಚ್ಚು ಮೋಸ ಮುಂತಾದ ಬೇಗೆಗಳು ಹೇಗೆ ಇದ್ದಾವು? ಅದಿರಲಿ; ದಾನಮಾಡಬೇಕೆಂಬ ಬುದ್ಧಿ ಬರುವುದೂ ದೊಡ್ಡದು; ದಾನಿ ಯಲ್ಲಿ ದೇವರ ಅಂಶವಿರಬೇಕು. ಅರಸನು ದೇವರಲ್ಲದಿಲ್ಲ ಎಂಬಂತೆ ದಾನಿಯೂ ದೇವರಲ್ಲದಿಲ್ಲ; ಭಗವಂತನು ದಯಾಸಾಗರ; ಆ ದಯೆಯ ಒಂದು ತೊಟ್ಟು ಹೃದಯದಲ್ಲಿಲ್ಲದೆ ದಾನಿಯಾಗು ವುದು ಹೇಗೆ? ಅವನು ಎಲ್ಲರಂತಲ್ಲ—

'ಇಕ್ಕುವವನೂರಿಗೊಂದೊಕ್ಕಲೆಂದೆನಬೇಡ
ಅಕ್ಷಯಪದವ ಪಡೆದು ಕೈಲಾಸದಿಂ
ದೊಕ್ಕಲಿರಬಂದ ಸರ್ವಜ್ಞ ||

ದೊರೆತನವ ಮಾಡುವರು ಕರೆದನ್ನ ನೀಡುವರು
ಉರಗಭೂಷಣನ ನೆನೆವರು ಧರೆಯೊಳಗೆ
ನರರಲ್ಲ ನೋಡು ಸರ್ವಜ್ಞ ||

ಅವನು ದೇವರೇ ಎಂದರೂ ಎನ್ನಬಹುದು—

ಈವಂಗೆ ದೇವಂಗೆ ಆವುದಂತರವಯ್ಯ
ದೇವನು ಜಗಕೆ ಕೊಡುವನು ಕೈಯಾರೆ
ಈವನೇ ದೇವ ಸರ್ವಜ್ಞ ||

"ಕೊಡುವಾತನೇ ಹರನು ಪಡೆವಾತನೇ ನರನು." ದೇವರು ಕೊಟ್ಟಾಗ, ತಾನೂ ತಿಂದು ಇತರರಿಗೂ ಕೊಡುವುದು ವಿವೇಕ—

ಹುಟ್ಟುವಾಗೀ ಧನವ ಮೊಟ್ಟೆಗಟ್ಟೆ ಳಿವನೇ ?
ಕಟ್ಟೆ ಕಡೆಯಲ್ಲಿ ಕೊಂಡೊಯ್ಯನಿವನಱಿದು
ಕೊಟ್ಟುಂಬ ದಾಸಿ ಸರ್ವಜ್ಞ ||

ಕೊಟ್ಟಿದ್ದು ತನಗೆ ಬಚ್ಚಿಟ್ಟದ್ದು ಪರರಿಂಗೆ
ಕೊಟ್ಟದ್ದು ಕೆಟ್ಟಿತೆನಬೇಡ ಮುಂದಕೆ
ಕಟ್ಟಿಹುದು ಬುತ್ತಿ ಸರ್ವಜ್ಞ ||

ದಾನಮಾಡಿದರೆ "ಶಿವನಲ್ಲಿ ಕಟ್ಟಿಹುದು ಬುತ್ತಿ." ಹೀಗೆ ತನಗೆ ಪರಲೋಕದಲ್ಲಿ ಬರುವ ಸದ್ಗತಿಯಿರಲಿ; ಇಹಲೋಕದಲ್ಲಿ ತಾನು ಮತ್ತೊಬ್ಬರನ್ನು ನೋಡಿ ಅಯ್ಯೋ ಎಂದರೆ ತನ್ನನ್ನೂ ಇತರರು ನೋಡಿ ಅಯ್ಯೋ ಎನ್ನುವರು.

ದಾನಮಾಡುವವನು ಪಾತ್ರ ಕಾಲ ದೇಶಗಳನ್ನು ಅರಿತು ದಾನಮಾಡಬೇಕು. ಹಾಗಾದರೆ ಅದಕ್ಕೆ ಹೆಚ್ಚಿನ ಬೆಲೆ—

ಇಚ್ಛೆಯನು ಅಱಿದಿತ್ತ ನುಚ್ಚೊಂದು ಮಾಣಿಕವು
ಇಚ್ಛೆಯು ತೀರ್ದ ಬಳಿಕಿತ್ತ ಮಾಣಿಕವು
ನುಚ್ಚಿನಿಂದತ್ತ ಸರ್ವಜ್ಞ ||

ಆಗ ಬಾ ಈಗ ಬಾ ಹೋಗಿ ಬಾ ಎನ್ನದೇ
ಆಗಲೇ ಕರೆದು ಕೊಡುವನ ಧರ್ಮ ಹೊ
ನ್ನಾಗದೇ ಬಿಡದು ಸರ್ವಜ್ಞ ||

ಯಾರಿಗೆ ಆಶೆಯಿದೆಯೋ ಅವನೇ ಬಡವ; ಯಾರು ಮತ್ತೊಬ್ಬನ ಬಾಗಿಲಿಗೆ ಬಂದು ಬೇಡುತ್ತಾನೆಯೋ ಅವನೇ ದೀನ;

ದಾನಶೀಲನಾದವನು, ಬಡವ ಭಾಗ್ಯವಂತ ಎಂಬ ವಿವೇಚನೆಯನ್ನೇ ಮಾಡುವುದಿಲ್ಲ—

ಮೇಲು ಕೀಳೆನಬೇಡ ಶೀಲವನು ಬಿಡಬೇಡ
ಕಾಲವಕಾಲವೆನಬೇಡ ಧರ್ಮದಾ
ಕೀಲ ಬೇರೆಂದ ಸರ್ವಜ್ಞ ॥

ಕೊಡುವವನ ಕೈ ಹಿಡಿಯುವವರಾರು ?

ಕೊಡುವವನ ಧರ್ಮಕ್ಕೆ ಕಡೆಯೇನು ಮೊದಲೇನು ?
ಎಡತಾಕಿಸಿಕೊಂಡು ಕೊಡುವನ ಧರ್ಮವು
ಹುಡಿಯು ಮಣ್ಣೆಂದ ಸರ್ವಜ್ಞ ॥

ನಿಜವಾಗಿ ನೋಡಿದರೆ, ದಾನಮಾಡುವವರು ಅತಿಯಾಗಿ ದಾನ ಮಾಡಬೇಕಾಗಿದ್ದಿಲ್ಲ—

ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಹೊಯ್ಯುವರೆ ?
ಕೊಡಬೇಡ ಕೊಡದೆ ಇರಬೇಡ ಧರ್ಮವ
ಬಿಡಬೇಡವೆಂದ ಸರ್ವಜ್ಞ ॥

ಅಷ್ಟು ಕೊಡಲಿ, ಇಷ್ಟು ಕೊಡಲಿ, ಎಷ್ಟಾದರೂ ಕೊಡಲಿ ; ಕೊಟ್ಟದ್ದನ್ನು

ಆಡದೇ ಕೊಡುವವನು ರೂಢಿಯೊಳಗುತ್ತಮನು
ಆಡಿ ಕೊಡುವವನು ಮಧ್ಯಮನಧಮ ತಾ
ನಾಡಿ ಕೊಡದವನು ಸರ್ವಜ್ಞ ॥

ದಾನಮಾಡುವವನಿಗೆ ತಾನು ಬಡವರ ಉದ್ಧಾರಿ ಎಂಬ ಅಹಂಕಾರವಾಗಲಿ, ಇವರು ತನ್ನವರು ಹೆರವರು ಹಿರಿಯರು ಕಿರಿಯರು ಎಂಬ ಪಕ್ಷಪಾತವಾಗಲಿ, ತಾನು ಕೊಟ್ಟು ಕೆಟ್ಟೆನೆಂಬ

ಪಶ್ಚಾತ್ತಾಪವಾಗಲಿ ಇರಬಾರದು; ಪ್ರತಿಫಲಾಪೇಕ್ಷೆ ಇರಬಾರದು. ಹಾಗಾದರೆ ಆ ದಾನ ಶ್ರೇಷ್ಠವಾಗುತ್ತದೆ—

ಅಱಿಯದೀಯುವ ದಾನ ತೆಱೆದು ನೋಡದ ಕಣ್ಣು
ತಿರುಗಿ ಬಯಸದನ ಶಿವಪೂಜೆ ಶಿವನಿಂದ
ಹಿರಿದೆಂದು ಅಱಿಗು ಸರ್ವಜ್ಞ ||

ಹಾಗಲ್ಲದೆ ಲೋಭಿಯಾದವನಿಗೆ ಇಹವೂ ಇಲ್ಲ. ಪರವೂ ಇಲ್ಲ—

ಉಣ್ಣದೊಡವೆಯು ಗಳಿಸಿ ಮಣ್ಣಿನೊಳು ತಾನಿರಿಸಿ
ಸಣ್ಣಿಸಿ ನೆಲನ ಸಾರಿದನ ಬಾಯೊಳಗೆ
ಮಣ್ಣು ಕಾಣಯ್ಯ ಸರ್ವಜ್ಞ ||

ಅವನ ಜನ್ಮ ಉಣ್ಣೆಯ ಜನ್ಮಕ್ಕಿಂತ ಕೀಳು. ಏಕೆಂದರೆ—

ಉಣ್ಣೆ ಕೆಚ್ಚಲೊಳಿರ್ದು ಉಣ್ಣದದು ನೊರೆವಾಲ
ಪುಣ್ಯವ ಮಾಡಿ ಉಣಲೊಲ್ಲದವನಿರವು
ಉಣ್ಣೆಯಿಂ ಕಷ್ಟ ಸರ್ವಜ್ಞ ||

ಅವನ ಊಟ ನಾಯಿಯ ಊಟ!

ವಿನಯವಿದ್ದಧಿಕರನು ತನುಗೆಟ್ಟು ಬಡವರನು
ಘನಹೀನವಳಿದು ಕರೆದುಣ್ಣದವನೂಟ
ಶುನಕ ತಿಂದಂತೆ ಸರ್ವಜ್ಞ ||

ಅವನು ಬದುಕಿದ್ದರೂ ಸತ್ತಂತೆಯೇ; ಸತ್ತವನು ಎಷ್ಟೋ ವಾಸಿ—

ಹೊತ್ತಾರೆ ಬಯ್ಗಿಂಗೆ ಮತ್ತೆ ಬಾ ಎಂದೆನುತ
ಹೊತ್ತನೆ ಕೊಂದು ಹುಸಿವವನಿಗಿಂತಲು
ಸತ್ತಾತ ಲೇಸು ಸರ್ವಜ್ಞ ||

ಇವರ ಸ್ವಭಾವ “ಹುಟ್ಟಿಯ ಒಳಗೆ ಜೇನಿಕ್ಕಿ ಪರರಿಂಗೆ ಕೊಟ್ಟುಹೋದಂತೆ.” ದಾನವೆಂದರೆ ತಲೆನೋವು, ದಂಡ ಹಾಕಿದರೆ ಎಷ್ಟಾದರೂ ಬಾಯಿಮುಚ್ಚಿಕೊಂಡು ಕೊಡುತ್ತಾರೆ—

ದಾನವೆಂದರೆ ತಲೆಯು ಚಾಣದಲಿ ಕಡಿದಂತೆ
ತಾನೊಂದು ತಪ್ಪು ಮಾಡಿ ನೂಱಾಱಿನ
ಮೌನದಿಂ ಕೊಡುವ ಸರ್ವಜ್ಞ ||

ಎಱೆಯಲೊಲ್ಲವ ಲೋಭಿ ಕಱೆಯಲೊಲ್ಲದ ಆವು
ಬಱೆಗಾಲ ಪಯಣ ಇವು ಮೂಱು ತನ್ನ ತಾ
ಸೆಱೆ ಮುಕೊಂಡಂತೆ ಸರ್ವಜ್ಞ ||

ಪಾಪಿ ಗಳಿಸಿದ್ದು ಪರರ ಪಾಲು; ಲೋಭಿ ಗಳಿಸಿದ್ದಕ್ಕೆ ಲೋಪ. ಆದ್ದರಿಂದ—

ಸಿರಿಯು ಭರ ಉಳ್ಳಾಗ ಮಱೆಯದಿರುವವ ಜಾಣ
ಕೊಱತೆಯಾದಾಗ ಕೊಡಲೆನಗಿಲ್ಲೆಂದು
ಅಱಿಸುವನೆ ಹೆಡ್ಡ ಸರ್ವಜ್ಞ ||

ದಾನಗಳಲ್ಲೆಲ್ಲಾ ಅನ್ನದಾನವೇ ಶ್ರೇಷ್ಠ; ದೇವರನ್ನು ಮೆಚ್ಚಿಸಬೇಕಾದರೆ ಅನ್ನದಾನಕ್ಕಿಂತ ಮತ್ತೊಂದಿಲ್ಲ.—

ಅನ್ನದೇವರ ಮುಂದೆ ಇನ್ನು ದೇವರು ಉಂಟೆ?
ಅನ್ನವಿರುವನಕ ಪ್ರಾಣವು; ಜಗದೊಳ
ಗನ್ನವೇ ದೈವ! ಸರ್ವಜ್ಞ ||

ದಾನವು, ಜೈನರು ಹೇಳುವಂತೆ, ಆಹಾರ ಅಭಯ ಭೈಷಜ್ಯ ಶಾಸ್ತ್ರ ಎಂದು ನಾಲ್ಕುವಿಧ. ಅವುಗಳಲ್ಲಿ ಎಲ್ಲಕ್ಕೂ ಮೊದಲು ಬರತಕ್ಕದ್ದು ಆಹಾರ. ಅನ್ನವಿಲ್ಲದವನಿಗೆ ಶಾಸ್ತ್ರವೇನು ಮನಸ್ಸಿಗೆ ಹಿಡಿಸೀತು?

ನಿದ್ದೆಗಳು ಬಾರವು ಬುದ್ಧಿಗಳು ತಿಳಿಯವು
ಮುದ್ದಿನ ಮಾತು ಸೊಗಸದು ಬೋನದ
ಮುದ್ದೆ ತಪ್ಪಿದರೆ ಸರ್ವಜ್ಞ ||

ಅನ್ನವಿಲ್ಲದಿದ್ದರೆ ಮನುಷ್ಯನು ಮಾನಮರ್ಯಾದೆಗಳನ್ನು ಬಿಟ್ಟು ದುಡಿಯಬೇಕಾಗುವುದು. ಮಾಡಬಾರದ್ದನ್ನೂ ಮಾಡಬೇಕಾಗುವುದು.—

ಕೊಟ್ಟಣವ ಕುಟ್ಟುವುದು ಮುಟ್ಟಿಯನು ಹೊಱಿಸುವುದು
ಬಿಟ್ಟಿಕೂಲಿಗಳ ಮಾಡಿಸುವುದು ಗೇಣು
ಹೊಟ್ಟೆಕಾಣಯ್ಯ ಸರ್ವಜ್ಞ ||

## ೧೦. ರಾಜ-ರಾಜಧರ್ಮ-ರಾಜಭಕ್ತಿ

ತ್ಯಾಗಬುದ್ಧಿಯು ಸಾಮಾನ್ಯಜನಕ್ಕಿಂತ ಹೆಚ್ಚಾಗಿ ರಾಜನಲ್ಲಿ ಇರಬೇಕು. ರಾಜನು ಪ್ರಜೆಗಳ ತಂದೆ; ಅವರನ್ನು ಅವನು ತನ್ನ ಶೌರ್ಯದಿಂದಲೂ ಔದಾರ್ಯದಿಂದಲೂ ವಿಶ್ವಾಸದಿಂದಲೂ ಕಾಪಾಡಬೇಕು. ಬಡವನ ದಾನ ಏನು ದಾನ?

ರಾಗವಿಲ್ಲದ ವಿದ್ಯೆ ಭೋಗವಿಲ್ಲದ ಸಿರಿ
ತ್ಯಾಗವಿಲ್ಲದವನ ದೊರೆತನ ಹಾಳೂರ
ಗೂಗೆಯಂತಕ್ಕು ಸರ್ವಜ್ಞ ||

ಅಸಗನತಿಗರ್ವಿಸಲು ಹಸು ಕಾಡಿ ಕಱೆಯಲು
ಉಸುರಿಲ್ಲದರಸು ಪ್ರಭುವಾಗೆ, ಪ್ರಜೆಯೆಲ್ಲ
ಮಸಿವಣ್ಣವಕ್ಕು ಸರ್ವಜ್ಞ ||

ಊರಿಗೆ ದೊರೆ ರೂಪು ನಾರಿಗೆ ಗುಣ ರೂಪು
ಚಾರುಕೋಕಿಲೆಗೆ ಸ್ವರ ರೂಪು ರಾಜಗೆ
ಧೀರತ್ವ ರೂಪು ಸರ್ವಜ್ಞ ||

ಪ್ರಜೆಗಳಿಗೆ ಮೇಲ್ಪಂಕ್ತಿಯಾಗಿದ್ದು, ಅವರ ಯೋಗಕ್ಷೇಮವನ್ನು ನೋಡಿಕೊಳ್ಳುವ ರಾಜನಿಲ್ಲದಿದ್ದರೆ ಎಲ್ಲವೂ ಅವ್ಯವಸ್ಥೆಗೆ ಇಟ್ಟುಕೊಳ್ಳುತ್ತದೆ—

ಗುರುವು ಇಲ್ಲದ ಮಠವು ಹಿರಿಯರಿಲ್ಲದ ಮನೆಯು
ಅರಸಿಲ್ಲದೂರು ಇವು ಮೂರು ನುಲಿ ಹರಿದ
ಹೊರಸಿನಂತಕ್ಕು ಸರ್ವಜ್ಞ ||

ಈಗಿನ ಕಾಲದಲ್ಲಿ, ಹಿರಿಯರ ಅಂಕೆ ಗುರುವಿನ ಬೋಧೆ ಅರಸಿನ ಶಿಕ್ಷೆ ಇವು ಇರಬೇಕೆನ್ನುವವರು ಕಡಮೆ. ಸ್ವಪ್ರವೃತ್ತಿ ಸ್ವಾತಂತ್ರ್ಯಪ್ರೀತಿ ಇವು ಹೆಚ್ಚಾಗುತ್ತಿವೆ. ಆದರೆ ಸರ್ವಜ್ಞನು ಸ್ವಾತಂತ್ರ್ಯದ ಬೆಲೆಯನ್ನೇನು ಅರಿಯದವನಲ್ಲ.—

ತಂತ್ರಿವಾದ್ಯವು ಲೇಸು ಮಂತ್ರಿಯಾ ಕೆಳೆ ಲೇಸು
ಯಂತ್ರವಾಹಕನ ದಯೆ ಲೇಸು ಜಗದಿ ಸ್ವ
ತಂತ್ರವೇ ಲೇಸು ಸರ್ವಜ್ಞ ||

ಆದರ್ಶನಾದ ರಾಜನು ಸತ್ಯವಂತನಾಗಿಯೂ ಶೀಲವಂತನಾಗಿಯೂ ಇರಬೇಕು—

ನೆತ್ತ ವಿತ್ತಕೆ ಬಲವು ಒತ್ತೆ ಸೂಳೆಗೆ ಬಲವು
ಕತ್ತಲೆಯು ಬಲವು ಕಳ್ಳಂಗೆ ಅರಸಿಗೆ
ಸತ್ಯವೇ ಬಲವು ಸರ್ವಜ್ಞ ||
ಪರನಾರಿಸೋದರನು ವರಶತ್ರುದಲ್ಲಣನು
ಕರಪಾಪಭಯ ಹೊರೆವ ಗುಣಯುತ ನೃಪಗೆ
ಸ್ಥಿರವಿಹಳು ಲಕ್ಷ್ಮಿ ಸರ್ವಜ್ಞ ||

ಅವನಿಗೆ ತಕ್ಕ ಮಂತ್ರಿಯಿದ್ದರೆ ರಾಜ್ಯವು ಸುರಕ್ಷಿತವಾಗಿರುತ್ತದೆ—

ಮಂತ್ರಿಯುಳ್ಳಾ ರಾಜ್ಯವೆಂತಿರಿಸಿದಂತಕ್ಕು
ಮಂತ್ರಿಯಿಲ್ಲವನ ಸಾಮ್ರಾಜ್ಯ ಕೀಲ್ಗಳೆದ
ಜಂತ್ರದಂತಕ್ಕು ಸರ್ವಜ್ಞ ॥

ಹೀಗೆ ರಾಜನು ಎಷ್ಟು ಒಳ್ಳೆಯವನಾದರೂ ಜನಕ್ಕೆ ಸದರ ಕೊಡಬಾರದು—

ಅರಿವು ಇರದಿರೆ ಹೊಲ್ಲ ಕರಿಯು ಬೆದರಿಲು ಹೊಲ್ಲ
ಅರೆಯದೂರೊಳಗೆ ಇರಹೊಲ್ಲ ದೊರೆಗಳಿಗೆ
ಸರಸವೇ ಹೊಲ್ಲ ಸರ್ವಜ್ಞ ॥

ಜನರೂ, ಅವನು ಒಳ್ಳೆಯವನೆಂದು ಸದರ ವಹಿಸಬಾರದು. ಅನುಗ್ರಹಮಾಡಲು ಸಾಮರ್ಥ್ಯವಿರುವವನಿಗೆ ನಿಗ್ರಹ ಮಾಡಲೂ ಸಾಮರ್ಥ್ಯವಿರುತ್ತದೆ. ಆದ್ದರಿಂದ—

ಅರಸನೋಲಯ್ಸುವರೆ ಕರಭೀತಿ ಬೇಕಯ್ಯ
ಅರಸು, ಕರಿ, ಉರಗನೊಳೆಚ್ಚರಿಲ್ಲದಡೆ
ತ್ವರಿತದಿಂ ಕೊಲುಗು ಸರ್ವಜ್ಞ ॥

ಮೆಚ್ಚಿದಂತರಸಿನಲಿ ಎಚ್ಚರಿಂದಿರಬೇಕು
ಎಚ್ಚರಿವು ತಪ್ಪಿನಡೆದರೆ ಆ ಮೆಚ್ಚು
ಕಿಚ್ಚಿನಂತಕ್ಕು ಸರ್ವಜ್ಞ ॥

ಇದಕ್ಕೆ ಅನೇಕ ಕಾರಣಗಳಿರುತ್ತವೆ—

ಅರಸ ರಕ್ಕಸನಂತೆ ವರಮಂತ್ರಿ ಹುಲಿಯಂತೆ
ಬರೆವಾತ ನಾಡ ನರಿಯಂತೆ ಪರಿವಾರ
ಗರಗಸದಂತೆ ಸರ್ವಜ್ಞ ॥

ಮತ್ತು

ಹರಿವ ನೀರೊಳಿವಳ್ಳಿ ತುರಗ ಚೈತ್ರವು ಬಂಡಿ
ಅರಸಿನ ಮನವು ಬೆಲೆವೆಣ್ಣು ಇವು ಏಳು
ತಿರುಹುವವರಿಚ್ಛೆ ಸರ್ವಜ್ಞ ॥

ದೇವರಲ್ಲಿ ಹೇಗೋ ರಾಜನಲ್ಲಿಯೂ ಹಾಗೆಯೇ ಭಕ್ತಿಯಿಂದಿರಬೇಕು—

ಅಡಿಯು ಮುಂದಿಡೆ ಸ್ವರ್ಗ ಅಡಿಯು ಹಿಂದಿಡೆ ನರಕ
ಅಡಿಗಶ್ವಮೇಧಫಲ ; ಸ್ವಾಮಿಕಾರ್ಯಕ್ಕೆ
ಮಡಿಯಲೇಬೇಕು ಸರ್ವಜ್ಞ ॥

ಪ್ರಜೆಗಳಿದ್ದರೇ ರಾಜ; ಪ್ರಜೆಗಳಿಂದಲೇ ರಾಜ್ಯ—

ಮಂದಿಯಿಲ್ಲದ ರಾಜ್ಯ ಕಂದನಿಲ್ಲದ ಭಾಗ್ಯ
ಬಂಧುವಿಲ್ಲದ ಮನೆತನ ಜಗದೊಳು
ಚಂದವಲ್ಲೆಂದ ಸರ್ವಜ್ಞ ॥

ಅವರಲ್ಲಿ ಸಿರಿಯೂ ಸಂತೋಷವೂ ನೆಲಸಿದ್ದರೆ, ತಾನು ಸುಖವಾಗಿ ರಾಜ್ಯಭಾರವಮಾಡಬಹುದು ; ತನ್ನ ಭಂಡಾರವು ತುಂಬಿರುತ್ತದೆ :—

ಭಂಡಾರ ತುಂಬಿ ನೀ ಬಂಡಿಯಲಿ ಹೇರುವರೆ
ಮಂಡಲವನಾಳಿ ಮೆರೆವರೆ ಒಕ್ಕಲನು
ಕೊಂಡಾಡಬೇಕು ಸರ್ವಜ್ಞ ॥

## ೧೧. ಸಂಸಾರ-ಹೆಂಗಸರು

ಹೆಂಗಸರನ್ನು ಕುರಿತು ನೂರಾರು ಪದ್ಯಗಳಿವೆ: ಅವರ ಗುಣ ಅವಗುಣ, ಸ್ಥಾನ ಮಾನ, ಇಹಪರಗಳಲ್ಲಿ ಅವರಿಂದ ಆಗುವ

ಒಳ್ಳೆಯದು ಕೆಟ್ಟದು, ಕಷ್ಟ ಸುಖ ಇವುಗಳ ವಿಚಾರವಾಗಿ ಹಲವು ಚಿತ್ರವಿಚಿತ್ರವಾದ ಮಾತುಗಳಿವೆ.

"ಹೆಣ್ಣಿನಿಂದಲಿ ಇಹವು ಹೆಣ್ಣಿನಿಂದಲಿ ಪರವು, ಹೆಣ್ಣಿಂದ ಸಕಲಸಂಪದವು". ಹೆಂಗಸಿಲ್ಲದ ಬಾಳು ಏನು ಬಾಳು ?

ಸುಣ್ಣವಿಲ್ಲದ ವೀಳ್ಯ ಬಣ್ಣವಿಲ್ಲದ ಮದುವೆ
ಹೆಣ್ಣಿಲ್ಲದವನ ಸಂಸಾರ ಮಳಲೊಳಗೆ
ಎಣ್ಣೆ ಹೊಯಿದಂತೆ ಸರ್ವಜ್ಞ ||

ದೇವಾಧಿದೇವತೆಗಳೂ ಅವರಿಗೆ ಮಾರುಹೋಗಿದ್ದಾರೆ— ಹೆಂಗಸು

ಹರಿಯ ಉರವನು ಮೆಟ್ಟಿ ಹರನ ಶಿರವನು ಹತ್ತಿ
ಸರಸಿಜೋದ್ಭವನ ಮೊಗಗೆಡಿಸಿ ನಿಂದಳು
ಹಿರಿಯರಿನ್ನಾರು ಸರ್ವಜ್ಞ ||

ಆದರೆ ಅವರು ಒಲಿಯುವುದು ಯಾರ ಯತ್ನ ?

ಅಂಗನೆಯರೊಲಿಯುವುದು ಬಂಗಾರ ದೊರೆಯುವುದು
ಸಂಗ್ರಾಮದೊಳಗೆ ಗೆಲುವುದು ಇವು ಮೂರು
ಸಂಗಯ್ಯನೊಲುಮೆ ಸರ್ವಜ್ಞ ||

ಅನುಕೂಲಳಾದ ಹೆಂಡತಿಯಿದ್ದರೆ ಇಹಲೋಕವೇ ಸ್ವರ್ಗ ಸಮಾನವಾಗುತ್ತದೆ—

ಬೆಚ್ಚನಾ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ
ಇಚ್ಛೆಯನ್ನರಿವ ಸತಿಯಾಗೆ ಸ್ವರ್ಗಕ್ಕೆ
ಕಿಚ್ಚು ಹಚ್ಚೆಂದ ಸರ್ವಜ್ಞ ||

ಅಂಥವಳೊಡನೆ ಬಾಳ್ವೆಮಾಡುವುದು " ಅಮೃತದ ಕೆನೆಯ

ಸವಿದಂತೆ.'' ಹಾಗಲ್ಲದೆ, ಹೆಂಗಸು ಹಿತವಿಲ್ಲದವಳಾಗಿ ಹೋರಾಡುತ್ತ ಲೊಟಗುಟ್ಟುತ್ತ ಇರುವವಳಾದರೆ ಸಂಸಾರವು ಅಸಾರವಾಗುತ್ತದೆ, ಅಸಹ್ಯವಾಗುತ್ತದೆ.

ಅಡಕೆಯಿಲ್ಲದ ವೀಳ್ಯ ಕಿಟಿಕಿಯಿಲ್ಲದ ಮನೆಯು
ಒಡಕುಬಾಯುವಳ ಮನೆವಾರ್ತೆ ಎಣ್ಣೆಯ
ಕುಡಿಕೆಯೊಡೆದಂತೆ ಸರ್ವಜ್ಞ ||

ಸೋರುವಾ ಮನೆಯಿಂದ ದಾರಿಯಾ ಮರ ಲೇಸು
ಹೋರುವಾ ಸತಿಯು ಬದುಕಿಂದ ಹೊಡೆದೊಯ್ವ
ಮಾರಿಯೇ ಲೇಸು ಸರ್ವಜ್ಞ ||

ಚುಚ್ಚುವಾ ಕೆರದಿಂದ ಕಚ್ಚುವಾ ಶುನಿ ಲೇಸು
ಸಿಚ್ಚಲು ಉಲಿವ ಸತಿಯಿಂದ ಉರಿದಿರ್ದ
ಕಿಚ್ಚು ತಾ ಲೇಸು ಸರ್ವಜ್ಞ ||

ಒಟ್ಟಿನಮೇಲೆ,

ನಾರಿ ಪರರುಪಕಾರಿ ನಾರಿ ಸ್ವರ್ಗಕೆ ದಾರಿ
ನಾರಿ ಸಕಲರಿಗೆ ಹಿತಕಾರಿ, ಮುನಿದರೆ
ನಾರಿಯೇ ಮಾರಿ ಸರ್ವಜ್ಞ ||

ಹಿಂದೆ ಸಮಾಜದಲ್ಲಿ ಸೂಳೆಗೆ ಒಂದು ಸ್ಥಾನವಿತ್ತು ; ಪ್ರೋತ್ಸಾಹವಿತ್ತು ; ಆದರೆ ಸರ್ವಜ್ಞನು ಎಂಥವರಿಗೂ ಸೂಳೆಯ ಸಹವಾಸವೇ ಯೋಗ್ಯವಲ್ಲವೆನ್ನುತ್ತಾನೆ—

ಒಂದೆಲಗ ಮೆಲಹೊಲ್ಲ ನಿಂದಕನ ನೆರೆ ಹೊಲ್ಲ
ತಂದೆಯನು ಜರೆವ ಮಗ ಹೊಲ್ಲ ಸೂಳೆಯು
ದಂದುಗವೆ ಹೊಲ್ಲ ಸರ್ವಜ್ಞ ||

# ೧೨. ನಡೆ-ನುಡಿ

ಮನುಷ್ಯನ ಗುಣಶೀಲಗಳು ಸ್ಥಿರವಾಗುವುದು ಅವನ ನಡೆನುಡಿಗಳಿಂದ; ಅವನು ಬದುಕುವುದೂ ಕೆಡುವುದೂ ಅವುಗಳಿಂದಲೇ—

ಕಣ್ಣು ಸಾಲಗೆ ಮನವು ತನ್ನ ದಂಡೆನಬೇಡ
ಅನ್ಯರು ಕೊಂದರೆನಬೇಡ ಇವು ಮೂರು
ತನ್ನ ಕೊಲ್ಲುವುವು ಸರ್ವಜ್ಞ ||

ಇಂದ್ರಿಯಚಪಲತೆಗೆ ಒಳಗಾದರೆ ಒಂದರ ಹಿಂದೆ ಮತ್ತೊಂದು ಅನರ್ಥ ಒದಗುತ್ತದೆ. ಸಾಲವೊಂದೇ ಸಾಲದೇ?

ಸಾಲವನು ಕೊಂಬಾಗ ಹಾಲೋಗರುಂಡಂತೆ
ಸಾಲಿಗನು ಬಂದು ಎಳೆವಾಗ ಕಿಬ್ಬದಿಯ
ಕೀಲ ಮುರಿದಂತೆ ಸರ್ವಜ್ಞ ||

ಗಡ್ಡವಿಲ್ಲದ ಮೋರೆ ದುಡ್ಡು ಇಲ್ಲದ ಚೀಲ
ಬಡ್ಡಿಯ ಸಾಲ ತೆರುವವನ ಬಾಳುವೆಯು
ಅಡ್ಡಕ್ಕು ಬೇಡ ಸರ್ವಜ್ಞ ||

ಬಂಗಿ, ಸಾರಾಯಿ, ತಂಬಾಕು ಇವುಗಳನ್ನು ಸೇವಿಸುವುದು ದುರಭ್ಯಾಸ; ಆದರೆ ತಾಂಬೂಲವು ಕೆಟ್ಟದ್ದಲ್ಲ; ಅದರಿಂದ ಆರೋಗ್ಯ, ಅಲಂಕಾರ—

ಗಾಳಿದೂಳಿಯು ದಿನಕೆ ನಾಳಿಗೆಯು ಮನೆ ಲೇಸು
ಹೋಳಿಗೆ ತುಪ್ಪ ಉಣಲೇಸು ಬಾಯಿಗೆ
ವೀಳೆಯವೆ ಲೇಸು ಸರ್ವಜ್ಞ ||

ಎಲೆಯು ಮೆಲ್ಲದ ಬಾಯಿ ತಲೆಯಿಲ್ಲದಾ ಮುಂಡ;
ಎಲೆಮೆದ್ದು ಬರಲು ಬೀದಿಯಲಿ ಈರಯ್ಯ
ತಲೆಯನಂತಕ್ಕು ಸರ್ವಜ್ಞ ||

ಸರಳತೆ, ಸೌಶೀಲ್ಯ, ಸತ್ಯ, ಪ್ರಾಮಾಣಿಕತೆ, ಗುರುಹಿರಿಯರಲ್ಲಿ ಭಕ್ತಿ ಇವು ಬದುಕುವುದಕ್ಕೆ ಮಾರ್ಗ. ಲೋಭರಾಹಿತ್ಯ, ಕಾಯಕ ಇವು ಸರಳತೆಗೆ ಹೆಗ್ಗುರುತು. ಲೋಭದಿಂದ ಏನೂ ಲಾಭವಿಲ್ಲ.

ಲೋಭದಿಂ ಕೌರವನು ಲಾಭವನು ಪಡೆದಿಹನೆ
ನಾಭಿಯಿಂ ಕೆಳಗೆ ಎರಡೂರು ಕೊಂಬಾಗ
ಲಾಭ ಬಂದಿಹುದೆ ಸರ್ವಜ್ಞ ||

ಪರಸ್ವತ್ತು ಹೇಗೋ ಪರಸತಿಯೂ ಹಾಗೇ: ಎರಡೂ ಮನೆ ಹಾಳುಮಾಡುವವೇ—

ಒಡಲ ಒತ್ತಾಡದಿರು ನುಡಿಯ ಹೋಗಾಡದಿರು
ನಡೆಯೊಳೆಚ್ಚರವ ಬಿಡದಿರು ಪರಸತಿಯ
ಕಡೆಗೆ ನೋಡದಿರು ಸರ್ವಜ್ಞ ||

ಆಶೆಯಿಂದ ಅಸತ್ಯ, ಅಧರ್ಮ ಎಲ್ಲಾ ಬರುತ್ತವೆ—

ನುಡಿಸುವುದಸತ್ಯವನು ಕೆಡಿಸುವುದು ಧರ್ಮವನು
ಹಿಡಿಸುವುದು ಕಟ್ಟಿ ಒಡಲನು ಲೋಭದ
ಗಡಣ ತಾನಯ್ಯ ಸರ್ವಜ್ಞ ||

ವೀರಶೈವ ವಚನಕಾರರೆಲ್ಲರೂ ಕಾಯಕಕ್ಕೆ ತುಂಬ ಪ್ರಶಸ್ತಿ ಕೊಡುತ್ತಾರೆ. ಕಾಯಕ ಮಾಡುವವನ ದೇಹ ಮನಸ್ಸುಗಳು ಆರೋಗ್ಯವಾಗಿರುತ್ತವೆ; ಅಂಥವನು ಸಮಾಜಕ್ಕೆ ಹೊರೆಯಾಗುವುದಿಲ್ಲ. ಕಾಯಕದಿಂದಲೇ ಕೈಲಾಸ.

ಅಲಸಿಕೆಯುಳ್ಳವಂಗೆ ಕಲಸಲಂಬಲಿಯಿಲ್ಲ
ಕೆಲಸಕ್ಕೆ ಅಲಸದಿರುವಂಗೆ ಬೇಕಿಂದ
ಹಲಸು ಕಾತಂತೆ ಸರ್ವಜ್ಞ ||

ಕಾಯಕವಮಾಡಿ ಅಷ್ಟೋ ಇಷ್ಟೋ ಗಳಿಸಿರುವವನಿಗೆ ಗೌರವ; ದುಡ್ಡಿಲ್ಲದವನಿಗೆ ಏನಿದೆ?

ಧನಕನಕವುಳ್ಳನಕ ದಿನಕರನಂತಕ್ಕು
ಧನಕನಕ ಹೋದ ಮರುದಿನ ಹಾಳೂರ
ಶುನಕನಂತಕ್ಕು ಸರ್ವಜ್ಞ ||

ಸತ್ಯವು ಶೀಲದ ತಿರುಳು; ನಿಜ ಹೇಳುವವರು ಇಕ್ಕಟ್ಟಿಗೆ ಸಿಕ್ಕಬಹುದು;

ಕಂಡುದನು ಆಡೆ ಭೂಮಂಡಲವು ಮುನಿಯುವುದು
ಕೊಂಡಾಡುತಿಚ್ಛೆನುಡಿದರೆ ಜಗವೆಲ್ಲ
ಮುಂಡಾಡುತಿಹುದು ಸರ್ವಜ್ಞ ||

ಆದರೇನು? ಅವರು ಸತ್ಯವಂತರೆಂಬುದು ಗೊತ್ತಾದರೆ,

ಸತ್ಯರಿಗೆ ಧರೆಯೆಲ್ಲ ಮಸ್ತಕದಿ ಎರಗುವುದು
ಹೆತ್ತ ತಾಯ್ಮಗನ ಕರೆವಂತೆ ಶಿವನವರ
ನೆತ್ತಿಕೊಂಬುವನು ಸರ್ವಜ್ಞ ||

ಉಪ್ಪಿಲ್ಲದುಣಹೊಲ್ಲ ಮುಪ್ಪು ಬಡತನ ಹೊಲ್ಲ
ತಪ್ಪನು ನುಡಿವ ಸತಿ ಹೊಲ್ಲ; ಒಪ್ಪಿರಲು
ತಪ್ಪುವುದೆ ಹೊಲ್ಲ ಸರ್ವಜ್ಞ ||

ಹಾಸು ಇಲ್ಲದ ನಿದ್ರೆ ಪೂಸು ಇಲ್ಲದ ಮಾಸ
ಭಾಷೆಯರಿಯದನ ಗೆಳೆತನ ಮೋಟಗೈ
ಬೀಸಿ ಕರೆದಂತೆ ಸರ್ವಜ್ಞ ||

ಮತ್ತೊಬ್ಬರನ್ನು ನಿಂದಿಸಬಾರದು—

ರಾಗ ಯೋಗಿಗೆ ಹೊಲ್ಲ ಭೋಗ ರೋಗಿಗೆ ಹೊಲ್ಲ
ಓಗರ ಎಣ್ಣೆ ಉಣಹೊಲ್ಲ ಪರನಿಂದೆ
ಆಗಲೂ ಹೊಲ್ಲ ಸರ್ವಜ್ಞ ||

ತಾನು ಸುಮ್ಮನಿದ್ದರೂ ನೀಚರು ಕೀಟಲೆಮಾಡಿ ಜಗಳ ತೆಗೆಯಬಹುದು, ಬಯ್ಯಬಹುದು; ತಾನು ಯೋಗ್ಯನಾಗಿದ್ದರೆ ಅದರಿಂದ ಏನೂ ಆಗುವುದಿಲ್ಲ. ಪ್ರತಿಯಾಗಿ ಬಯ್ದರೆ ಮಾನ ಗೇಡು:

> ಆನೆ ಬೀದಿಲಿ ಬರಲು ಶ್ವಾನ ತಾ ಬೊಗಳುವುದು
> ಶ್ವಾನನಂತಾನೆ ಬೊಗಳಿದರೆ ಆನೆಯ
> ಮಾನವೇ ಹಾನಿ ಸರ್ವಜ್ಞ ||

ಮಾತಿಗೆ ಮಾತು ಕೊಡುವುದು ಒಂದು ವಿಶೇಷವಲ್ಲ; ಎಲ್ಲಿ ಹೇಗೆ ಎಷ್ಟು ಮಾತನಾಡಬೇಕೆಂದು ತಿಳಿದುಕೊಳ್ಳುವುದು ಕಷ್ಟ; ಅದೇ ಒಂದು ವಿದ್ಯೆ.

> ಮಾತ ಬಲ್ಲಾತಂಗೆ ಯಾತವು ಸುರಿದಂತೆ
> ಮಾತಾಡಲರಿಯದಾತಂಗೆ ಒರಿಯಾತ
> ನೇತಾಡಿದಂತೆ ಸರ್ವಜ್ಞ ||

ಮಾತಿನಲ್ಲಿ ರಸಿಕತೆಯಿದ್ದರೆ ಕೇಳುವವರಿಗೆ ಆನಂದ; ಇಲ್ಲದಿದ್ದರೆ ಅದು ಕರ್ಣಕಠೋರ—

> ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ
> ರಸಿಕನಲ್ಲದನ ಬರಿಮಾತು ಕಿವಿಯೊಳ್ ಕೂ
> ರ್ದಸಿಯು ಬಡಿದಂತೆ ಸರ್ವಜ್ಞ ||

ಅದರಲ್ಲಿಯೂ "ನಕ್ಕು ನಗಿಸುವಾ ನುಡಿ ಲೇಸು."

ಮಾತಿನಲ್ಲಿ ಅಡಕವಿರಬೇಕು; ಹುರುಳು ಇರಬೇಕು; ಇಲ್ಲದಿದ್ದರೆ ಅದು ವ್ಯರ್ಥ—

> ಮಾತಿನಾ ಮಾಲೆಯೂ ತೂತಾದ ಮಡಕೆಯೂ
> ಹಾತೆಯೂ ಹುಲ್ಲ ಸರವೆ ಇವು ನಾಲ್ಕು
> ಏತಕ್ಕು ಬೇಡ ಸರ್ವಜ್ಞ ||

ಮಾತಿನಲ್ಲಿ ವಿನಯ ವಿವೇಕಗಳಿರಬೇಕು; ಇಲ್ಲದಿದ್ದರೆ ಅಪಾರ ನಷ್ಟವಾಗುತ್ತದೆ—

ಉದ್ದುರುಟು ಮಾತಾಡಿ ಇದ್ದುದನು ಹೋಗಾಡೆ
ಉದ್ದನ ಮರದ ತುದಿಗೇಱಿ ಕೈಜಾಱಿ
ಬಿದ್ದು ಸತ್ತಂತೆ ಸರ್ವಜ್ಞ ‖

ಇವೆಲ್ಲವನ್ನೂ ದೊಡ್ಡವರಿಂದ ಕಲಿತುಕೊಳ್ಳಬೇಕು; ಅವರಲ್ಲಿಟ್ಟ ಗೌರವವು ವ್ಯರ್ಥವಾಗುವುದಿಲ್ಲ.

ಗುರುಗಳಿಗೆ ಹಿರಿಯರಿಗೆ ಶಿರಬಾಗಿ ಎಱಗಿವರೆ
ನರಸುರರೊಲಿದು ಸಿರಿ ಸುರಿದು ಕೈಲಾಸ
ಕರತಲಾಮಲಕ ಸರ್ವಜ್ಞ ‖

ಅವರಿಗೆ ಕಿರಿಯರಲ್ಲಿ ಪ್ರೀತಿಯಿರುತ್ತದೆ. ಅಂಥವರ ದರ್ಶನವೇ ಶ್ರೇಯಸ್ಸು—

ಜಾಣೆಯಾ ನುಡಿ ಲೇಸು ವೀಣೆಯಾ ಸ್ವರ ಲೇಸು
ಮಾಣದೆ ವದನ ಶುಚಿ ಲೇಸು ಕೂರ್ಪವರ
ಕಾಣುವದೆ ಲೇಸು ಸರ್ವಜ್ಞ ‖

# ೧೩. ಕಾಲಜ್ಞಾನ-ವಾದ-ವೈದ್ಯ

ಮಹಾತ್ಮರೆನಿಸಿಕೊಂಡವರು ಮುಂದಾಗುವುದನ್ನು ತಿಳಿದು ಹೇಳಬೇಕು, ಚಿನ್ನಮಾಡುವುದನ್ನು ಅರಿತಿರಬೇಕು, ರೋಗಗಳಿಗೆ ಔಷಧ ಕೊಡಬೇಕು, ಎಂದು ಮುಂತಾಗಿ ಇಂದಿಗೂ ಜನರಲ್ಲಿ ಭಾವನೆಯಿದೆ. ಗೋಸಾಯಿಗಳನ್ನು ಆಶ್ರಯಿಸಿ ಜನರು ರಸವಿದ್ಯೆಯನ್ನು ಕಲಿಯಲು ಪ್ರಯತ್ನಿಸುತ್ತಿರುವುದನ್ನು

ಎಲ್ಲರೂ ನೋಡಿರಬಹುದು. ಪ್ರಾಯಶಃ ಸರ್ವಜ್ಞನೂ ವಿರಕ್ತನಾಗಿ ಗೋಸಾಯಿಯಹಾಗೆ ತಿರುಗುತ್ತಿದ್ದನೆಂದು ತೋರುತ್ತದೆ. ಆದರೆ ಅವನಿಗೆ ಕಾಲಜ್ಞಾನ ಹೇಳುವ ಶಕ್ತಿ ಎಷ್ಟರ ಮಟ್ಟಿಗೆ ಇತ್ತೋ ಗೊತ್ತಿಲ್ಲ. ಈಚೆಗೆ ಯಾರೋ ಅವನ ಆರಾಧಕರು ಈ ವಿಧವಾದ ಮಹತ್ವವನ್ನು ಅವನಲ್ಲಿ ಆರೋಪಿಸಿರಬಹುದು. ಅಂತು ಸರ್ವಜ್ಞನ ಹೆಸರಿನಲ್ಲಿ "ಕಾಲಜ್ಞಾನ" ದ ಪದ್ಯಗಳು ಕೆಲವು ಇವೆ. ಇವುಗಳನ್ನು ಬರೆದ ಸರ್ವಜ್ಞನೇ ಬೇರೆಯಿದ್ದರೂ ಇರಬಹುದೆಂಬ ಸಂದೇಹವನ್ನು ಹಿಂದೆ ಸೂಚಿಸಿದೆ. (ಪುಟ ೬) ಈ ಪದ್ಯಗಳಲ್ಲಿ ಅವತಾರಪುರುಷನಾದ ವೀರ ವಸಂತರಾಯನ ಆಗಮನ, ವಿಜಯನಗರರಾಜ್ಯದ ನಾಶ, ಇಂಗ್ಲಿಷಿನವರು ಇಂಡಿಯಕ್ಕೆ ಬಂದು ರಾಜ್ಯವನ್ನು ಗೆದ್ದು ರೈಲು ತಂತಿ ಮುಂತಾದವುಗಳನ್ನು ಹಾಕಿದ್ದು ಈ ವಿಚಾರಗಳೆಲ್ಲಾ ಬರುತ್ತವೆ.

"ರಸವಾದ"ದಲ್ಲಿ, ಎಂದರೆ ಪಾದರಸ ತಾಮ್ರ ಮುಂತಾದವುಗಳಿಂಥ ಚಿನ್ನಮಾಡುವ ವಿದ್ಯೆಯಲ್ಲಿ, ಹಿಂದಿನಕಾಲದ ಜನರಿಗೆ ತುಂಬ ಚಪಲ. ಪಾದರಸದಿಂದ ಚಿನ್ನವಾಗುವುದು ಅಸಂಭವವಲ್ಲವೆಂದೂ, ಚಿನ್ನವೂ ಪಾದರಸವೂ ತುಂಬ ಹತ್ತಿರ ಇರತಕ್ಕ ವಸ್ತುಗಳೆಂದೂ ಈಚೆಗೆ ವಿಜ್ಞಾನಿಗಳು ಪ್ರಯೋಗಶಾಲೆಯಲ್ಲಿ ಪರೀಕ್ಷೆನಡೆಸಿ ತೋರಿಸಿದ್ದಾರೆ. ಆದರೆ ಅದು ಮೂಲಿಕಾದಿ ಪ್ರಯೋಗದಿಂದ ಹೇಗೆ ಸಾಧ್ಯವೋ ಯಾರೂ ತೋರಿಸಿಲ್ಲ. ಅಂತೂ ಆ ವಿಷಯಕವಾದ ಕೆಲವು ಪದ್ಯಗಳೂ ಇವೆ. ಇವುಗಳಲ್ಲಿ ಹೇಳುವ ಗಿಡಮೂಲಿಕೆಗಳಾಗಲಿ ಅವುಗಳನ್ನು ಉಪಯೋಗಿಸುವ ಕ್ರಮವಾಗಲಿ ತಿಳಿಯುವುದಿಲ್ಲ. ಅಂಥ ಎರಡು ಪದ್ಯಗಳನ್ನು ಮುಂದೆ ಕೊಟ್ಟಿದೆ—

ರಸವುಂಟೊಂಗಡಿಯಲ್ಲಿ ಕಿಸು[1]ವುಂಟು ಸಾಲೆಯಲಿ
ವಸುಭಟನೆಂಬ ಗಿಡನುಂಟು ವಾದಿಗಳು
ಹಸಿವರೇಕೆಂದ ಸರ್ವಜ್ಞ ||

ನಾಗ[2] ಸತುವುಗಳೆರಡು ನಾಗದಾ ರಸ ಮೂಱು
ಮೇಗೆ ಅಂಜಿಯನೊಡಗೂಡೆ ಹೇಮ ತಾ
ನಾಗಲೇ ಬಕ್ಕು ಸರ್ವಜ್ಞ ||

ಹಿಂದೆ, ವೈದ್ಯವಿದ್ಯೆಯೂ ವಾದವಿದ್ಯೆಯೂ ಒಟ್ಟಿಗೆ ಇರುತ್ತಿದ್ದವೆಂದು ತೋರುತ್ತದೆ. ಆದ್ದರಿಂದಲೇ "ವಾದಭ್ರಷ್ಟ, ವೈದ್ಯಶ್ರೇಷ್ಠ" ಎಂಬ ಹೇಳಿಕೆ ಇದೆ. ಸರ್ವಜ್ಞನು ಅಂಥ ಘನ ಚಿಕಿತ್ಸೆಗಳನ್ನೂ ಔಷಧಗಳನ್ನೂ ಏನೂ ಹೇಳಿಲ್ಲ. ವೈದ್ಯನನ್ನು ದೂರವಿಟ್ಟಿರುವುದು ಹೇಗೆ, ಎಂದರೆ ಆರೋಗ್ಯವಾಗಿರುವುದು ಹೇಗೆ, ಎಂಬ ವಿಷಯವನ್ನು ಕುರಿತು ಕೆಲವು ಮಾತುಗಳನ್ನು ಹೇಳಿದ್ದಾನೆ. ಮನೆಯಲ್ಲಿ ಮುದುಕರಿಂದ ಇಂಥ ಮಾತು ಕೇಳಬರುವುದುಂಟು—

ಉಂಡು ಕೆಂಡವ ಕಾಸಿ ಉಂಡು ಶತಪದ ನಡೆದು
ಉಂಡೆಡದ ಮಗ್ಗುಲಲಿ ಮಲಗಿದರೆ ವೈದ್ಯನ
ಬಂಡಾಟವಿಲ್ಲ ಸರ್ವಜ್ಞ ||

ಇದರಲ್ಲಿ ಎಷ್ಟು ನಿಜವಿದೆಯೊ ಅನುಭವವಿರುವವರು ಹೇಳಬೇಕು; ನಿಜವಿದ್ದರೆ ಏಕೆ ಎಂಬುದನ್ನು ಶರೀರಶಾಸ್ತ್ರಜ್ಞರು ವಿಚಾರಮಾಡಬೇಕು.

ಹಸಿಯದಿರೆ ಉಣಬೇಡ ಹಸಿದು ಮತ್ತಿರಬೇಡ
ಬಿಸಿಬೇಡ ತಂಗೂಳುಣಬೇಡ ವೈದ್ಯರಾ
ಬೆಸನವೇ ಬೇಡ ಸರ್ವಜ್ಞ ||

---

[1] ಕಿಸು = ತಾಮ್ರ [2] ನಾಗ = ಸೀಸ

ಆರೋಗ್ಯ ಬೇಕೆನ್ನುವವನಿಗೆ ಇದು ಅತ್ಯುತ್ತಮವಾದ ನಿಯಮವೆಂಬುದರಲ್ಲಿ ಸಂದೇಹವಿಲ್ಲ.

ಅಕ್ಕಿ, ಜೋಳ, ನವಣೆ, ರಾಗಿ—ಇವುಗಳಲ್ಲಿ ನವಣೆಯ ಮೇಲೆ ಆವನಿಗೆ ತುಂಬ ಮೆಚ್ಚಿಗೆ ಎಂದು ತೋರುತ್ತಾನೆ. "ನವಣೆಯನ್ನುಂಬುವನು ಹವಣಾಗಿ ಇರುತಿಹನು."

ನವಣೆಯಾ ಬೋನಕ್ಕೆ ಹವಣುಳ್ಳ ತೊಗೆಯಾಗಿ<br>
ಕವಣೆಗಲ್ಲಷ್ಟು ಬೆಣ್ಣೆಯ ದರೂಟದ<br>
ಹವಣ ನೋಡೆಂದ ಸರ್ವಜ್ಞ ||

ನೀರೋಗಿಯಾಗಿರಬೇಕಾದರೆ ರಾಗಿ ಸರಿ. ತೋಳದಂತಾಗ ಬೇಕಾದರೆ ಜೋಳವನ್ನು ತಿನ್ನಬೇಕು. ಅಕ್ಕಿ ಎಲ್ಲಕ್ಕಿಂತ ಕಡೆ—

ಅಕ್ಕಿಯನು ಉಂಬುವನು ಪಕ್ಕಿಯಂತಾಗುವನು<br>
ಸಿಕ್ಕಿ ರೋಗದಲಿ ರೊಕ್ಕವ ವೈದ್ಯನಿ<br>
ಗಿಕ್ಕುತ್ತಲಿರುವ ಸರ್ವಜ್ಞ ||

## ೧೪. ಜ್ಯೋತಿಷ-ಶಕುನ

ವೇದಾಂತವಾಗಲಿ, ವೈದ್ಯವಾಗಲಿ, ಅದನ್ನು ಸರ್ವಜ್ಞನು ಶಾಸ್ತ್ರಾನುಸಾರವಾಗಿ, ಶಾಸ್ತ್ರೀಯವಾದ ರೀತಿಯಲ್ಲಿ, ಪಂಡಿತರು ಮೆಚ್ಚುವಂತೆ, ಬೋಧಿಸುವುದಕ್ಕೆ ಹೋಗುವುದಿಲ್ಲ. ಅವನು ಹೇಳಿರುವುದು, ಸಾಮಾನ್ಯವಾಗಿ ಅನುಭವದಿಂದ ಬಂದು ಎಲ್ಲರಲ್ಲಿಯೂ ಪ್ರಚಾರದಲ್ಲಿದ್ದು ಎಲ್ಲರಿಗೂ ಅರ್ಥವಾಗುತ್ತಿದ್ದದ್ದು. ಹೀಗೆ ಅವನು ಜ್ಯೋತಿಷದ ಗಣಿತ, ಫಲ, ಶಕುನ ಮುಂತಾದವುಗಳಮೇಲೂ ಕೆಲವು ಪದ್ಯಗಳನ್ನು ಬರೆದಿದ್ದಾನೆ—ನಕ್ಷತ್ರ,

ಕರಣ, ಯೋಗ, ತಾರೆ ಇವುಗಳನ್ನು ಕಂಡುಹಿಡಿಯುವ ಸುಲಭ ಮಾರ್ಗ, ಮಳೆ ಬರುವ ಲಕ್ಷಣ, ಗುರು ಶನಿ ಮುಂತಾದ ಗ್ರಹಗಳ ಚಾರದಿಂದ ಒದಗುವ ಫಲ ಮುಂತಾದ ಅಂಶಗಳನ್ನು ಇವುಗಳಲ್ಲಿ ಕಾಣಬಹುದು.

ಇವು ಮಳೆ ಬರುವುದರ ಸೂಚನೆಗಳು :

ಆಡನಿ ಮೂಡಲು ಮಿಂಚೆ ಪಡುವಲಕೆ ಧನುವೇಳೆ
ಬಡಗಣದ ಗಾಳಿ ಕಡುಬೀಸೆ ಮಳೆಯು ತಾ
ತಡೆಯದಲೆ ಬಕ್ಕು ಸರ್ವಜ್ಞ ||

ತೆಂಕಲಿಗೆ ಮುಗಿಲಡಱೆ ಶಂಕರನ ದೆಸೆ ಮಿಂಚೆ
ಪಂಕಜಾರಾತಿ ಗುಡಿಗಟ್ಟೆ ಮಳೆಯು ತಾ
ಛೋಂಕನೆ ಬಕ್ಕು ಸರ್ವಜ್ಞ ||

ಶಕುನಗಳೆಲ್ಲಾ ಸೀನಿಗೆ ಬಹುಜೆಱಿಯುಂತೆ!

ಏಸ ಹುಸ್ಸಿಸದಿರಲು ಸೀನ ಮುಸ್ಸಿಸಬೇಕು
ಸೀನ ಮುಸ್ಸಿಸದೆ ಹೋದರೆ ಹೋದಲ್ಲಿ
ಹಾನಿಯೋ ಬಕ್ಕು ಸರ್ವಜ್ಞ ||

ಒಮ್ಮೆ ಸೀತರೆ ಹೊಲ್ಲ ಇಮ್ಮೆ ಸೀತರೆ ಲೇಸು
ಕೆಮ್ಮಿ ಕೇಕರಿಸಿ ಉಗುಳುವ ಲೇಸು ಆ
ಬೊಮ್ಮಗೂ ಇಲ್ಲ ಸರ್ವಜ್ಞ ||

ಹೀಗೆ ಸರ್ವಜ್ಞವಚನಗಳು ಮುಖ್ಯವಾಗಿ ಇಹಪರ ಸುಖ ಸಾಧಕಗಳಾದ ನೀತಿಯನ್ನೂ ಧರ್ಮವನ್ನೂ ಬೋಧಿಸುತ್ತವೆ. ಇವುಗಳ ಜೊತೆಗೆ ಕೇವಲ ಚಮತ್ಕಾರ ಮಾತ್ರವುಳ್ಳ ಕೆಲವು ಒಗಟುಗಳೂ ಇವೆ. ಅವುಗಳಲ್ಲಿ ಹತ್ತನ್ನು ಆರಿಸಿ ಮುಂದೆ ಕೊಟ್ಟಿದೆ.

# ೧೫. ಒಗಟುಗಳು

ಕಲ್ಲರಳಿ ಹೂವಾಗಿ ಎಲ್ಲರಿಗೆ ಬೇಕಾಗಿ
ಮಲ್ಲಿಕಾರ್ಜುನನ ಶಿಖರಕ್ಕೆ ಬೇಕಾಗಿ
ಬಲ್ಲವರು ಹೇಳಿ ಸರ್ವಜ್ಞ ‖ (ಸುಣ್ಣದ ಹರಳು)

ಕಾಲಿಲ್ಲದೇ ಹರಿಗು ತೋಳಿಲ್ಲದೇ ಹೊಡೆಗು
ನಾಲಗಿಲ್ಲದಲೆ ಉಲಿಯುವುದು ಕವಿಕುಲದ
ಮೇಲುಗಳು ಪೇಳಿ ಸರ್ವಜ್ಞ ‖ (ಹೊಳೆ)

ಹತ್ತು ಸಾಸಿರ ಕಣ್ಣು ನೆತ್ತಿಲಾದರು ಬಾಲ
ಹುತ್ತಿನ ಹುಳವ ಹಿಡಿಯುವುದು ಕವಿಜನರ
ನೊತ್ತನಿವ ಹೇಳಿ ಸರ್ವಜ್ಞ ‖ (ನವಿಲು)

ಹಲ್ಲು ನಾಲಗೆಯಿಲ್ಲ ಸೊಲ್ಲ ಸೋಜಿಗವಲ್ಲ
ಕೊಲ್ಲದೆ ಮೃಗವ ಹಿಡಿಯುವುದು ಲೋಕದೊಳ
ಗೆಲ್ಲ ತಾವಿನೊಳು ಸರ್ವಜ್ಞ ‖ (ಬಲೆ)

ನೆತ್ತಿಯಲಿ ಉಂಬುವುದು ಸುತ್ತಲೂ ಸುರಿಸುವುದು
ಎತ್ತಿದರೆ ಎರಡು ಹೋಳಹುದು ಕವಿಗಳಿದ
ಕುತ್ತರವ ಹೇಳಿ ಸರ್ವಜ್ಞ ‖ (ಬೀಸುವ ಕಲ್ಲು)

ಕಾಲುಂಟು ನಡೆಯದದು ಮೂಲೆಯಲಿ ಕಟ್ಟಿಹುದು
ಬಾಲಕರ ಸೊಮ್ಮು ಹೊಡುವದು ಕವಿಗಳಲಿ
ಬಾಲರಿದ ಪೇಳಿ ಸರ್ವಜ್ಞ ‖ (ತೊಟ್ಟಿಲು)

ಅರೆವ ಕಲ್ಲಿನ ಮೇಲೆ ಮರವು ಹುಟ್ಟಿದ ಕಂಡೆ
ಮರದ ಮೇಲೆರಡು ಕರ ಕಂಡೆ ವಾಸನೆಯು
ಬರುತಿಹುದ ಕಂಡೆ ಸರ್ವಜ್ಞ ‖ (ಸಾಣೆಕಲ್ಲು)

ಕಡೆ ಕಪ್ಪು ನಡು ಬಿಳಿದು ಉಡುವ ವಸ್ತ್ರವಲ್ಲ
ಬಿಡದೆ ನೀರುಂಟು ಮಡುವಲ್ಲ ಕವಿಗಳೇ
ಬೆಡಗ ಪೇಳುವುದು ಸರ್ವಜ್ಞ ‖ (ಕಣ್ಣು)

ಕಾಲಿಲ್ಲ ಕೊಂಬುಂಟು ಬಾಲದಾ ಪಕ್ಷಿಯದು
ಮೇಲೆ ಹಾರುವದು ಹದ್ದಲ್ಲ ಕವಿಗಳಲಿ
ಬಾಲರಿದ ಹೇಳಿ ಸರ್ವಜ್ಞ ॥ (ಗಾಳಿಪಟ)

ಹಲ್ಲುಂಟು ಮೃಗವಲ್ಲ ಸೊಲ್ಲು ಸೋಜಿಗವಲ್ಲ
ಕೊಲ್ಲುವುದು ತನ್ನ ಸಂಬಿಪರ ಇವನರಿದು
ಬಲ್ಲವರು ಹೇಳಿ ಸರ್ವಜ್ಞ ॥ (ನರಗಸ)

# ೧೬. ನೀತಿಕಾವ್ಯ-ಸಾಹಿತ್ಯದಲ್ಲಿ ಅದರ ಸ್ಥಾನ

ಸಂಸ್ಕೃತ ದ್ರಾವಿಡ ಸಾಹಿತ್ಯಗಳಲ್ಲಿ ನೀತಿಕಾವ್ಯಗಳಿಗೇನು ಕೊರತೆಯಿಲ್ಲ. ಮಹಾಭಾರತ ರಾಮಾಯಣ ಪುರಾಣ ಪುಣ್ಯ ಕಥೆಗಳೆಲ್ಲಾ ನೀತಿಮಯ. ಶುಕ್ರನೀತಿ, ಚಾಣಕ್ಯನೀತಿ ಮುಂತಾದ ಲೌಕಿಕ ನೀತಿಗಳು ಬೇರೆ. ಪಂಚತಂತ್ರ ಹಿತೋಪದೇಶ ಮುಂತಾದ ನೀತಿಕಥಾ ಸಾಹಿತ್ಯವೂ ಇವೆ. ಧರ್ಮ ವಿಚಾರ ನೀತಿಬೋಧೆಗಳಿಲ್ಲದ ಮಹಾಕಾವ್ಯವಿಲ್ಲ. ಸುಭಾಷಿತಾವಳಿಗಳೂ ನೀತಿಶತಕಗಳೂ ಬೇಕಾದಷ್ಟಿವೆ. ಕನ್ನಡ ಸಾಹಿತ್ಯದಲ್ಲಿ ಪುರಾಣಗಳು ಪೌರಾಣಿಕ ಕಾವ್ಯಗಳು ಸ್ತೋತ್ರಗಳು ಶತಕಗಳು ವಚನಗಳು ಕೀರ್ತನೆಗಳು ಎಲ್ಲಾ ನೀತಿ ಪ್ರಧಾನವಾದವುಗಳೇ. ತಮಿಳು ತೆಲಗು ಸಾಹಿತ್ಯಗಳಲ್ಲಿಯೂ ಹೀಗೆಯೇ ಇವೆ. ತಮಿಳಿನ ಕುರಳ್ ಕಾವ್ಯವು ಸರ್ವಜ್ಞನಿಗಿಂತ ಎಷ್ಟೋ ಹಿಂದಿನ ಇಂಥ ಕಾವ್ಯ; ತೆಲುಗಿನ ವೇಮನನ ಕಾವ್ಯವು ಸರ್ವಜ್ಞನಿಗಿಂತ ಸ್ವಲ್ಪ ಈಚಿನ ಇಂಥ ಕಾವ್ಯ.

ಇವು ಆ ಭಾಷೆಗಳಲ್ಲಿ ಜನಪ್ರಿಯವಾಗಿ ಉತ್ತಮ ಕಾವ್ಯಗಳೆ ನಿಸಿಕೊಂಡಿವೆ. ಸರ್ವಜ್ಞನು ಕನ್ನಡಿಗರ ತಿರುವಳ್ಳುವರ್, ಕನ್ನಡಿಗರ ವೇಮನ. ಅವರಂತೆ ಇವನಿಗೂ ನೀತಿ ಸಾಹಿತ್ಯದಲ್ಲಿ ಉಚ್ಚ ಸ್ಥಾನವು ಸಲ್ಲುತ್ತದೆ.

ಸರ್ವಜ್ಞನ ಕಾವ್ಯ ಒಟ್ಟಿನಮೇಲೆ ನೀತಿಕಾವ್ಯ. ನೀತಿ ಕಾವ್ಯವು ಕಾವ್ಯವೇ ಅಲ್ಲ, ಒಂದು ಪಕ್ಷ ಕಾವ್ಯವಾದರೂ ಉತ್ತಮಕಾವ್ಯವಲ್ಲ ಎಂದು ಹೇಳುವುದುಂಟು. ನೀತಿ ಎಂದರೆ ನೀರಸ, ಅಪ್ರಿಯ, ಎಂಬುದು ಇವರ ಭಾವ. ಇದು ಸ್ವಲ್ಪಮಟ್ಟಿಗೆ ನಿಜ. ಆದರೆ ಕಾವ್ಯ ಉತ್ತಮವಾಗುವುದು ಬರಿಯ ಅದರ ಸಾಮಗ್ರಿಯಿಂದಲೇ ಅಲ್ಲ. ಅದರ ಗುಣ ನಿಷ್ಕರ್ಷೆಯಲ್ಲಿ ವಸ್ತುವೆಷ್ಟು ಮುಖ್ಯವೋ ರೂಪ ರೀತಿಗಳೂ ಅಷ್ಟೇ ಮುಖ್ಯ. ಬೆಳ್ಳಿ ಬಂಗಾರಗಳ ಗಟ್ಟಿಗಳು ಯಾವ ಆಕಾರಗಳಲ್ಲಿದ್ದರೂ ಅವು ಬೆಳ್ಳಿ ಬಂಗಾರಗಳೇ ; ಅವುಗಳ ಬೆಲೆ ಹೆಚ್ಚು ಕಡಮೆಯಾಗುವುದಿಲ್ಲ. ಆದರೆ ಕಲೆಯ ಮಾತು ಬೇರೆ. ಮಣ್ಣು, ಕಲ್ಲು, ಕಬ್ಬಿಣ, ಮರ, ದಂತ, ಬೆಳ್ಳಿ, ಬಂಗಾರ— ಯಾವ ಪದಾರ್ಥವೇ ಆಗಿರಲಿ, ಅದರಿಂದ ಮಾಡಿದ ಕಲಾಕೃತಿಯ ರೂಪರಚನೆಗಳಿಂದ ಅದರ ಬೆಲೆ ಹೆಚ್ಚು ಕಡಮೆಯಾಗುತ್ತದೆ. ರಸಿಕನಾದ ಕವಿಯ ಕೈಗೆ ಸಿಕ್ಕಿದರೆ, ಕಸವೂ ರಸವಾಗುತ್ತದೆ. ಕವಿಯಲ್ಲದ ಅರಸಿಕನ ಕೈಗೆ ಸಿಕ್ಕಿದರೆ ರಸವೂ ಕಸವಾಗುತ್ತದೆ. ರಸಿಕತೆಯೇ ಕವಿಯ ಜೀವ. ಅದು ಸರ್ವಜ್ಞನಲ್ಲಿ ಬೇಕಾದಷ್ಟಿದೆ. ಆದ್ದರಿಂದ ಅವನ ನೀತಿಕಾವ್ಯವು ಕಾವ್ಯವಾಗಿದೆ, ಉತ್ತಮಕಾವ್ಯವಾಗಿದೆ.

# ೧೭. ಖಂಡನಕಾವ್ಯ-ವಿಡಂಬನಕಾವ್ಯ ಅವುಗಳ ವಿಶೇಷಗುಣ

ಯಾವನೊಬ್ಬ ವ್ಯಕ್ತಿಯನ್ನು ಹಿಡಿದು ಬಯ್ಯುವ, ಗುಣಾವ ಗುಣಗಳನ್ನೇ ಹಾಸ್ಯಮಾಡಿ ಬರೆಯುವ ಖಂಡನಕಾವ್ಯಗಳಲ್ಲಿ ಯೂ ವಿಡಂಬನಕಾವ್ಯಗಳಲ್ಲಿಯೂ ಇನ್ನೊಂದು ವಿಶೇಷವಿದೆ. ಅದೇನೆಂದರೆ, ಪ್ರತಿಯೊಬ್ಬರೂ ಅವುಗಳನ್ನು ಓದಿ ಸಂತೋಷ ಪಡುತ್ತಾರೆ. ಅವುಗಳಲ್ಲಿ ಹೊಗಳಿರುವ ಗುಣಗಳೆಲ್ಲವೂ ತಮ್ಮ ಲ್ಲಿವೆ ಎಂದುಕೊಳ್ಳುತ್ತಾರೆ. ದೋಷಗಳೆಲ್ಲವೂ ತಮಗೆ ಆಗದ ವರಲ್ಲಿವೆ ಎಂದುಕೊಳ್ಳುತ್ತಾರೆ. ಇವು ಹಸುಬೆಯ ಚೀಲದ ಹಾಗೆ; ಬೆನ್ನಿನ ಮೇಲಿರುವ ಭಾಗದಲ್ಲಿ ತಮ್ಮ ತಪ್ಪುಗಳು ಬೆನ್ನು ಮುರಿಯುವಷ್ಟಿರಬಹುದು; ಆದರೂ ಅವು ಬೆನ್ನ ಮೇಲಿವೆ, ಆದ್ದರಿಂದ ಮರೆಯಾಗಿವೆ. ಮುಂದಿನ ಚೀಲದಲ್ಲಿ ಇತರರ ತಪ್ಪುಗಳಿವೆ. ಎಳ್ಳೋ ನಾಲ್ಕಾರಿದ್ದರೂ ಅವು ಸದಾ ಕಣ್ಣ ಮುಂದಿರುತ್ತವೆ; ಆದ್ದರಿಂದ ಕಂಡೇ ಕಾಣುತ್ತವೆ. "ಇದು ಒಂದು ವಿಚಿತ್ರವಾದ ಕನ್ನಡಿ. ಅದರಲ್ಲಿ ಪ್ರತಿಯೊಬ್ಬರಿಗೂ ತಮ್ಮ ಮುಖ ಹೊರತು ಮಿಕ್ಕೆಲ್ಲರ ಮುಖವೂ ಕಾಣುತ್ತದೆ"— ಎಂದು ಒಬ್ಬ ವಿಡಂಬನಕಾರನು ಹೇಳಿದ್ದಾನೆ. ನಮ್ಮ ನಮ್ಮ ಮುಖದ ವಿಕಾರ ಸರಿಯಾದ ಕನ್ನಡಿಯ ಮುಂದೆ ನಿಂತಾಗ ತಾನೇ ಕಂಡೀತು? ಏಕೆಂದರೆ ವಿಕಾರವಿಲ್ಲದವರು ಯಾರು? "ಕೋತಿ ಎಲ್ಲಿದೆ?" ಎಂದು ಕೇಳಿದರೆ "ಕನ್ನಡಿಯಲ್ಲಿ!" ಎಂಬುದು ಉತ್ತರ.

# ೧೮. ಸರ್ವಜ್ಞನ ಶೈಲಿ

ಸರ್ವಜ್ಞನು ರಸಿಕನೆಂದು ಭರ್ತೃಹರಿಯಂತೆ ಶೃಂಗಾರಶತಕವನ್ನೇನು ಬರೆದಿಲ್ಲ. ಹೆಣ್ಣುಗಳನ್ನು ಬಣ್ಣಿಸಿ ಅವರ ಒಲಪು ವಯ್ಯಾರವ ನಡೆನುಡಿಗಳಿಂದ ಬಾಯಲ್ಲಿ ನೀರೂರಿಸುವುದು ಅವನ ಮಾರ್ಗವಲ್ಲ. ಹೀಗೆಂದರೆ, ಅವನು ಅವುಗಳ ಸ್ವರೂಪವನ್ನೂ ಬೆಲೆಯನ್ನೂ ಅರಿಯದ ಅರಸಿಕನೆಂದು ಭಾವಿಸಬಾರದು. "ಹೆಣ್ಣಿಲ್ಲಬಣ್ಣಗಳು ಎಲ್ಲಿ ಸರ್ವಜ್ಞ?" ಎಂದು ಅವನೇ ಕೇಳಿದ್ದಾನೆ. ಅವನು ಇಹಜೀವನದ ಸುಖದುಃಖಗಳೆರಡನ್ನೂ ಬಲ್ಲನು; ಆದ್ದರಿಂದ ಸುಖವೊಂದನ್ನೇ ನೋಡಿ ಅದರಲ್ಲಿ ಮರುಳಾಗಿ, ದುಃಖದ ಕಡೆಗೇ ನೋಡದೆ, ಕಂಡರೂ ಕಣ್ಣು ಮುಚ್ಚಿಕೊಂಡು, ರಾತ್ರಿ ನೋಡಿದ ಹಾಳುಬಾವಿಗೆ ಹಗಲು ಹೋಗಿ ಬೀಳಬೇಡಿರೆಂದು ಎಚ್ಚರಿಕೆಕೊಡುತ್ತಾನೆ. ಇದರಂತೆ ಮಿಕ್ಕ ಮೋಹಗಳು, ಮಾಯಗಳು, ಮೌಢ್ಯಗಳು. ಅವನ ರಸಿಕತೆ ಕಂಡುಬರುವುದು ಅವುಗಳನ್ನು ಖಂಡಿಸುವ ರೀತಿಯಲ್ಲಿ. ನೀತಿಕಾವ್ಯಗಳೊಳಗೆ ಸಾಮಾನ್ಯವಾಗಿ ಕಂಡುಬರುವ ಗುರುತ್ವ ಗಾಂಭೀರ್ಯಗಳಿಗೆ ಬದಲಾಗಿ ಅವನು ಲಘುತ್ವಹಾಸ್ಯಗಳನ್ನು ತಂದುಹಾಕುತ್ತಾನೆ. ಆದರೆ ಅವನು ಬೆಣ್ಣೆಯ ಹೊನ್ನಪ್ಪನಲ್ಲ; ಅವನ ಭಾವಭಾಷೆಗಳಲ್ಲೇನು ಜೇನುತುಪ್ಪ ತೊಟ್ಟಿಕ್ಕುತ್ತಿರುವುದಿಲ್ಲ. ತನ್ನ ತಿಂಡಿಗೆ ಅವನು ಸಕ್ಕರೆಯ ಪಾಕ ಹಾಕುವುದಕ್ಕೆ ಬದಲಾಗಿ, ಉಪ್ಪು ಖಾರ ಹಚ್ಚಿ, ನಿಂಬೆಯ ಹುಳಿ ಹಿಂಡಿ, ಇಂಗು ಹಾಕಿ ಕೊಡುವುದೇ ಹೆಚ್ಚು. ಮಾರ್ದವ, ಮಾಧುರ್ಯ, ನಯ, ನವಿರು, ಸುಳಿವು, ಸೂಚನೆ, ಇವು ಸಾಮಾನ್ಯವಾಗಿ ಬಹಳ ಕಡಮೆ. ಮಾತುಗಳು ಕೆಲವುವೇಳೆ ಕಪಾಲಕ್ಕೆ

ಕೊಟ್ಟಂತೆ ಇರುತ್ತವೆ, ಛಟೀರನೆ ಚಾಟಿಯಿಂದ ಏಟುಹೊಡೆದಂತೆ ಬೀಳುತ್ತವೆ. ಆ ಚಾಟಿಗೇನು ಮೊಕಮಲ್ಲು ಸುತ್ತಿರುವುದಿಲ್ಲ, ಕಲಾಪತ್ತು ಕಿಂಕಾಪು ನೆಯ್ದಿರುವುದಿಲ್ಲ; ಸಾನೇರಿ ಅಂಟಿಸಿರುವುದಿಲ್ಲ; ಮುಳ್ಳುಕೋಲು ಹುಟ್ಟಿದ್ದು ಹುಟ್ಟಿದ ಹಾಗಿರುತ್ತದೆ.

> ಕರೆಯುದಲೆ ಬಯುವವನ ಒರೆಯುದಲೆ ಓದುವವನ
> ಒಱಿಗಾಲಿಸಿಂದ ನಡೆವವನ ಕರೆತಂದು
> ಕೆರದಿಂದ ಹೊಡೆಯೆಂದ ಸರ್ವಜ್ಞ ||

ಎಂಬುದನ್ನು ಇದಕ್ಕೆ ಉದಾಹರಣೆಯಾಗಿ ಹೇಳಬಹುದು. ಅವನಿಗೆ ಯಾರದ್ದು ಏನು ದಾಕ್ಷಿಣ್ಯ, ಹಂಗು? ಯಾರಿಗೆ ಒಳ್ಳೆಯವನಾಗಿ ಯಾರಿಂದ ಅವನಿಗೆ ಏನಾಗಬೇಕಾಗಿದೆ? ಸುಖಭೋಜನವೇ? ಒಳ್ಳೆಯ ವಸತಿಯೆ? ಅವೇ ಬೇಡ!

> ಹಂಗಿನರಮನೆಯಿಂದ ವಿಂಗಡದ ಗುಡಿ ಲೇಸು
> ಭಂಗಬಟ್ಟುಂಬ ಬಿಸಿಯನ್ನ ಕಿಂತಲು
> ತಂಗುಳವೆ ಲೇಸು ಸರ್ವಜ್ಞ ||

ತನ್ನನ್ನು ಮತ್ತೊಬ್ಬರು ಹೊಗಳಲಿಲ್ಲವಲ್ಲಾ ಎಂಬ ಸಂಕಟವಾಗಲಿ, "ಕವಿಗಳು ನಿರ್ಮತ್ಸರರಾಗಲಿ" ಎಂಬ ಪ್ರಾರ್ಥನೆಯಾಗಲಿ ಅವನ ವಚನಗಳಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಇದರ ಮೇಲೆ ಅವನು ಹೇಳುವುದು ಸುಳ್ಳೋ? ಅಲ್ಲದೆ, ಯಾರ ಯಾರ ವಿಚಾರವಾಗಿ ಅಪ್ರಿಯವಾದ ಮಾತುಗಳನ್ನು ಆಡಿದ್ದಾನೋ ಅಂಥವರು ಹೊರಗೆ ಹಾರಾಡಿ ಹೋರಾಡಿದರೂ ಒಳಗೆ ಅವನ ಮಾತು ನಿಜವೆಂದುಕೊಳ್ಳುತ್ತಾರೆ; ಅಪ್ರಯತ್ನವಾಗಿ ತಿದ್ದಿಕೊಳ್ಳುತ್ತಾರೆ.

ಅವನ ಉದ್ದೇಶ್ಯವೂ ಅದೇಯೆ. ಜನರು ತಮ್ಮ ಲೋಪ ದೋಷಗಳನ್ನು ಸರಿಪಡಿಸಿಕೊಂಡು ಜಳ್ಳನ್ನೂ ಕಾಳನ್ನೂ ವಿವೇಚನೆಮಾಡಿ ತಿಳಿದುಕೊಂಡು, ಉಪಯೋಗಿಸಿ ಉತ್ತಮವಾಗಿ ಬಾಳಿಬದುಕಬೇಕೆಂಬುದು—ಹುಚ್ಚುನಾಯಿಯ ಹಾಗೆ ಕಂಡ ಕಂಡದ್ದರ ಮೇಲೆಲ್ಲಾ ಬಿದ್ದು ಕಚ್ಚಬೇಕೆಂಬುದಲ್ಲ; ಅವನ ಮನೋಭಾವವೂ ಅಂತಹದೇ: ಇಡಿಯ ಪ್ರಪಂಚದೊಡನೆಯೇ ಅತೃಪ್ತಿಹೊಂದಿ, ಎಲ್ಲರನ್ನೂ ಹಳಿಯುತ್ತ ದೂರುತ್ತ ಸರ್ವದಾ ಗೊಣಗುಟ್ಟುತ್ತಿರುವುದಲ್ಲ: ಭಗವಂತನ ಲೀಲೆಯನ್ನು ಬಲ್ಲವನೋ ಎಂಬಂತೆ ಸದಾ ತೃಪ್ತನಾಗಿ, ನಗುನಗುತ್ತ, ತೋರಿದ್ದನ್ನು ತೋರಿದಂತೆ ತಡೆಬಡೆಯಿಲ್ಲದೆ ಹೇಳಿಬಿಡುವುದು. ದಂಭ, ದುರ್ಗುಣ, ದುರಾಚಾರ, ದುರಹಂಕಾರ ಇವುಗಳನ್ನು ಕಂಡರೆ ಮಾತ್ರ ಅವನಿಗೆ ರೋಷವೂ ಅಸಹನೆಯೂ ಹತ್ತಿ ಉರಿಯೇಳುತ್ತವೆ; ಆಗ ಅವುಗಳ ಮುಂದೆ ನಿಲ್ಲುವುದೂ ಕಷ್ಟವಾಗುತ್ತದೆ; ಕೆಲವು ವೀರಶೈವ ವಚನಕಾರರೂ ವೈಷ್ಣವ ಕೀರ್ತನಕಾರರೂ ಇಂಥವರೇ. ಈ ವಚನಗಳನ್ನು ನೋಡಿ—

"... ಇಂತಿರ್ದಶ್ರೀಯುದೆ ಪರ್ವತಕ್ಕೆ ಹೋಗಿ ಪಾತಾಳಗಂಗೆಯಲ್ಲಿ ಮುಳುಗಿ ತಲೆಯ ಬೋಳಿಸಿಕೊಂಡು ಗಂಗೆಯೊಳು ಕೋಣನಹಾಗೆ ಮೈಗೆಟ್ಟು ಪಕ್ಕನೆ ಮುಳುಗಿ ಅಲ್ಲಿಂದ ಬಂದು ಅನ್ನ ವಸ್ತ್ರ ಕುಸುಮವಂ ಕೊಟ್ಟು ಪಾಪ ಹೋಯಿತ್ತೆಂದು, ಅಲ್ಲಿಂದ ಬಂದು ಲಿಂಗವನಡಿಗಡಿಗೆ ಹೊಯ್ದು ಬಾರದ ಪಾಪವ ತಾನಾಗ ಬರಿಸಿಕೊಂಡು ತಗರ ಜನ್ಮದಲ್ಲಿ ಹುಟ್ಟುವರಯ್ಯ . . .''

"... ತುದಿನಾಲಗೆಯಲ್ಲಿ ಭಕ್ತರ ನಂಬಿದೆನೆಂದು ಗಳಹುವ ಗೊಡ್ಡ ಹೊಲೆಯನ ಕಂಡೊಡೆ, ಎದೆಎದೆಯನು ಒದ್ದೊದ್ದು ತುಳಿ ಎಂದಾತ ನಮ್ಮ ಅಂಬಿಗರ ಚೌಡಯ್ಯ . . ."

"... ಕಾಮಕ್ರೋಧದಲ್ಲಿ ಮುಳುಗಿ ಮತಿಗೆಟ್ಟು ಶಿವಪಥಕ್ಕೆ ದೂರಾಗಿ ದುರಾಚಾರವ ಆಚರಿಸಿ ನಡೆನುಡಿಗಳು ಹೊಲಬಿತಾಗಿ ವ್ಯರ್ಥ ಹೊತ್ತುಗಳೆದು ಸತ್ತು ಹೋಗುವ ಜಡದೇಹಿ ಕಡುಪಾತಕ..."

"ಇಂತಪ್ಪ ಜಂಗಮನು ಪೂಜೆಮಾಡುವಂತಹ ಶಿವಭಕ್ತನು ಉಭಯುತರ ಮೂಗ ಸೀಳಿ ಮೆಣಸಿನ ಹಿಟ್ಟು ತುಪ್ಪವ ತುಂಬಿ ಪಡಿಹಾರಿಗಳೆಡದ ಪಾದುಕೆಯಿಂದೆ ಪಡಪಡನೆ ಹೊಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು."*

ಸರ್ವಜ್ಞನ ಬರವಣಿಗೆಯೂ ಹೀಗೆಯೇ, ಕೆಲವು ವೇಳೆ ಧೂರ್ತನಂತೆ ವರ್ತಿಸುತ್ತದೆ, ದನದಂತೆ ನುಗ್ಗುತ್ತದೆ. ಅವನು ಯಾವ ಕಠಿಣವಾದ, ಕ್ರೂರವಾದ, ಮಾತನ್ನು ಆಡುವುದಕ್ಕೂ ಹಿಂಜರಿಯುವುದಿಲ್ಲ; ದೇಹದ ಯಾವ ಅಂಗದ ಯಾವ ಕೆಲಸ ವನ್ನು ಬೇಕಾದರೂ ವಾಚ್ಯವಾಗಿ ಹೇಳಿಬಿಡುತ್ತಾನೆ. ಅವುಗ ಳಿಗೆ ಉದಾಹರಣೆ ಕೊಡುವುದಕ್ಕೆ ನಮಗೇ ಮನಸ್ಸು ಮಣಿ ಯುತ್ತದೆ. ಆದರೆ ಅವನಲ್ಲಿ ಒಳಗೊಂದು ಹೊರಗೊಂದು ಇಲ್ಲ; ಅವನ ಸ್ವಭಾವ ಬೇವಿನಹಣ್ಣಿನಂತೆ ಹೊರಗೆ ಸಿಹಿ ಒಳಗೆ ಕಹಿ ಅಲ್ಲ; ಬೆಳ್ಳುಳ್ಳಿಯಂತೆ ಹೊರಗೂ ಒಳಗೂ ಒಂದೇ ಸ್ವಚ್ಛವಾದ ಬಣ್ಣ—ಒಂದೇ ಕಟುವಾದ ವಾಸನೆ. ಅವನ ರೀತಿಯಲ್ಲಿ ಕುಹಕ, ಕುಚೋದ್ಯ, ಬೇಕಾದಷ್ಟಿವೆ. ಆದರೆ ಕೊಂಕು, ಕುಟಿಲತೆ, ಸುತ್ತು ಬಳಸುಗಳು ಇರುವುದಿಲ್ಲ. ಅವನು ಎಂದೂ ಒಳಗೆ ಗರ್ವವನ್ನು ತುಂಬಿಕೊಂಡು ಹೊರಗೆ ಭಕ್ತ ವಿಗ್ರಹದಂತೆ ನಯವನ್ನು ನಟಿಸುವುದಿಲ್ಲ. ಇದು ಅವನ ಋಜು ಸ್ವಭಾವದ ಫಲವಾಗಿ ಕಾಣುತ್ತದೆ. ಋಜುತೆ ಪ್ರಾಮಾಣಿಕತೆ ಗಳು ಜೀವನದಲ್ಲಿ ಹೇಗೋ ಬರೆವಣಿಗೆಯಲ್ಲಿಯೂ ಹಾಗೆಯೇ

---

*ಅಂಬಿಗರ ಚೌಡಯ್ಯನ ವಚನಗಳು, ಪುಟ ೫೧-೫೨, ೬೩, ೧೧೫.

ಬೆಲೆಯುಳ್ಳ ಗುಣಗಳು. ಪ್ರಾಮಾಣಿಕತೆ ಪರೋಪಕಾರ ಬುದ್ಧಿ ಯಿರುವುದರಿಂದಲೇ ಅವನ "ನಕ್ಕು ನಗಿಸುವಾ ನುಡಿ" ಲೇಸು ಆಗಿರುವುದು. ಹೀಗೆ ನಗುವ ಮನೋಧರ್ಮವೂ ನಗಿಸುವ ಮಾತೂ ಪ್ರಾಚೀನ ಸಂಸ್ಕೃತ ಕನ್ನಡ ಸಾಹಿತ್ಯಗಳಲ್ಲಿ ಅಪೂರ್ವ. ಇದನ್ನು ಇಷ್ಟು ಯಥೇಚ್ಛವಾಗಿ ನಮ್ಮ ಸಾಹಿತ್ಯದಲ್ಲಿ ತಂದು ಕೊಟ್ಟಿರುವುದಕ್ಕಾಗಿ ಕನ್ನಡಿಗರು ಸರ್ವಜ್ಞನಿಗೆ ಎಷ್ಟು ಕೃತಜ್ಞ ರಾಗಿದ್ದರೂ ಸಾಲದಾಗಿದೆ.

ಸರ್ವಜ್ಞನು ಜನತೆಯ ಕವಿ; ಅವನ ತ್ರಿಪದಿಯು ಜನತೆಯ ಪದ್ಯ; ಹಾಗೇ ಅದರ ಭಾಷೆಯೂ ಜನದ ಭಾಷೆ; ವ್ಯಾಖ್ಯಾನಗಳನ್ನೂ ನಿಘಂಟುಗಳನ್ನೂ ಇಟ್ಟುಕೊಂಡು ಅದನ್ನು ಅರ್ಥ ಮಾಡಿಕೊಳ್ಳಬೇಕಾಗಿಲ್ಲ; ಎಂಥ ಕಷ್ಟವಾದ ಅಭಿಪ್ರಾಯಗಳನ್ನಾದರೂ ಅವನು ಸುಲಭವಾದ ಮಾತುಗಳಲ್ಲಿ ಖಚಿತವಾಗಿ ಚಿತ್ರಿಸುತ್ತಾನೆ. ಅವನು ಹೇಳುವ ಸಂಗತಿಗಳೂ ಕೊಡುವ ಹೋಲಿಕೆಗಳೂ ಹಾಗೇ ಎಲ್ಲರಿಗೂ ಪರಿಚಿತವಾದವುಗಳು—

೧. ಕಸಹತ್ತಿದಾರಂಬ, ತೂತಾದ ಮಡಕೆ, ಹಾಳೂರ ಶುನಕ, ಸೋರುವ ಮನೆ, ಚುಚ್ಚುವ ಕೆರ, ಇಂಗಿನ ನಾತ, ಹೇನನ್ನು ತಿನ್ನುವ ಹೀನ, ಕಚ್ಚಲಮೇಲಿರುವ ಉಣ್ಣೆ, ಹಾವಸೆಯ ಕಲ್ಲು, ಹಾಳೂರ ಗೂಗೆ, ಹಲ್ಲಿನ ಮಧ್ಯದಲ್ಲಿರುವ ನಾಲಗೆ—ಇತ್ಯಾದಿ.

೨. ಕೆಸರೊಳಗೆ ಮುಳ್ಳುತುಳಿದಂತೆ, ಮರವಮೇಲೆ ಹತ್ತಿ ಕೈಜಾರಿ ಬಿದ್ದಂತೆ, ಬೇರಿಂದ ಹಲಸು ಕಾತಂತೆ, ಸಾಸವೆ ಎಣ್ಣೆಯನ್ನು ಕಣ್ಣಿಗೆ ಹಾಕಿಕೊಂಡಂತೆ, ಬರಿ ಯಾತ ನೇತಾಡಿದಂತೆ, ಕಿವಿಯೊಳಗೆ ದಸಿ ಬಡಿದಂತೆ, ತಲೆ ಹೋದ ಮುಂಡದಂತೆ, ಮೋಟುಕೈ ಬೀಸಿ ಕರೆದಂತೆ, ತವುಡು ತಿಂದಂತೆ, ಕಳ್ಳನು

ಮನೆಹೊಕ್ಕುಹೋದಂತೆ, ಎಣ್ಣೆಯ ಕುಡಿಕೆಯೊಡೆದಂತೆ, ನಾಯಿ ಹಳೆಯ ಕೆರವ ಕಡಿದಂತೆ, ಹುಡಿಮಣ್ಣು ಮುಕ್ಕಿದಂತೆ, ತನ್ನ ತಾನಿರಿದುಕೊಂಡಂತೆ, ಎತ್ತು ಗಾಣವ ಹೊತ್ತು ಸುತ್ತಿಬಂದಂತೆ, ಭಾನು ಮೋಡದಲಿ ಹೊಳೆವಂತೆ, ಮುದಿಗೂರಲು ಒದರಿ ಸತ್ತಂತೆ, ಹತ್ತಿದ್ದ ಕಜ್ಜಿ ಹೋದಂತೆ, ಕೂಪದೊಳು ನೇಣು ಹರಿದಂತೆ, ಅತ್ತಿಮರ ತಾ ಕಾಯ ಹೊತ್ತಿರ್ದಂತೆ—ಇತ್ಯಾದಿ.

ಅನೇಕ ವಾಕ್ಯಗಳು ಗಾದೆಯ ಮಾತುಗಳಂತೆ, ಅನುಭವದ ಸಾರವನ್ನು ಒಳಕೊಂಡು "ವೇದಕ್ಕೆ ಸಮಾನ"ವಾಗಿರುತ್ತವೆ– ಶ್ವಾನ ತೆಂಗಿನಕಾಯ ಮೆಲಬಲ್ಲುದೇ? ಗಜವೇರಿ ಬಪ್ಪವನ ಕುನ್ನಿ ಕಚ್ಚುವುದೇ? ನೆತ್ತದಾ ಹಾಸಂಗಿ ಎತ್ತಬಿದ್ದರು ದಾಯ! ಕುರಿ ಕಬ್ಬಿನೊಳಹೊಕ್ಕು ಅರಿವುದೇ ತನಿರಸವ? ಖಂಡಸಕ್ಕರೆಯ ಮೆಲುವಾತ ಮುಗ್ಗಿದ ಹಿಂಡಿಗೆರಗುವನೆ? ನಡುಬೀದಿಯಲ್ಲಿ ಪವನ ಬಿತ್ತಿದರೆ ಮುಡಿಯುದವರು ಯಾರು?–ಇತ್ಯಾದಿ.

ಹೋಲಿಸುವ ವಸ್ತುಗಳು ಕೆಲವುವೇಳೆ ಪರಸ್ಪರ ಅಸಂಬದ್ಧ ವಾಗಿರಬಹುದು—

> ಅಳು ಸೂಳೆಯು ನಾಯಿ ಕೋಳಿ ಜೋಯಿಸ ವೈದ್ಯ
> ಗೂಳಿಯು ತಗರು ಪ್ರತಿರೂಪ ಕಂಡರೆ
> ಕಾಳಗವೆಂದ ಸರ್ವಜ್ಞ ||
>
> ಗವುಡನೊಳು ಹಗೆತನವು ಕಿವುಡನೊಳು ಏಕಾಂತ
> ಪ್ರವುಢನೊಳು ಮೂಢನುಪದೇಶ ಹಸಿದೆದ್ದು
> ತವುಡು ತಿಂದಂತೆ ಸರ್ವಜ್ಞ ||

ಆದರೆ ಹೋಲಿಕೆಯಲ್ಲಿ ಔಚಿತ್ಯವಿರುತ್ತದೆ, ಸ್ವಾರಸ್ಯವಿರುತ್ತದೆ.

ಸರ್ವಜ್ಞನು ಪ್ರೌಢವಾದ ಅಲಂಕಾರಗಳ ಗೋಜಿಗೆ ಹೋಗುವುದಿಲ್ಲ; ಉಪಮಾಲಂಕಾರವೊಂದೇ ಅವನಿಗೆ ಸಾಕು;

ಅದು ಯಥೇಚ್ಛವಾಗಿದೆ; ಕವಿಗೆ ಅದೇ ಒರೆಗಲ್ಲು. ಒಂದೆರಡು ಕಡೆ ಶ್ಲೇಷ ಬರುತ್ತದೆ; ಅದೂ ಸುಲಭ—ಎರಡೂರು, ತುರುಕರು, ಅವರೆ, ಇತ್ಯಾದಿ. ಆದರೆ ಹೆಚ್ಚು ಅಲಂಕಾರಗಳ ಅಭಾವದಿಂದ ಕಾವ್ಯಕ್ಕೇನು ಕೊರತೆ ಬಂದಿಲ್ಲ.

# ೧೯. ತ್ರಿಪದಿ

ಸರ್ವಜ್ಞವಚನಗಳು "ತ್ರಿಪದಿ"ಯಲ್ಲಿವೆ. ತ್ರಿಪದಿ ಎಂದರೆ ಮೂರುಪಾದದ ಅಥವಾ ಸಾಲಿನ ಪದ್ಯ ಎಂದು ಅರ್ಥ. (ಇವರ ಲಕ್ಷಣವನ್ನು "ಕನ್ನಡ ಕೈಪಿಡಿ"ಯಲ್ಲಿ ನೋಡಿ.) ವೇಮನನ ಪದ್ಯಗಳು ನಾಲ್ಕು ಪಾದಗಳಿರತಕ್ಕವು.—

> ತಲ್ಲಿದಂಡ್ರಿಮೀದ ದಯಲೇನಿ ಪುತ್ರುಂಡು
> ಪುಟ್ಟನೇಮಿ ವಾಡು ಗಿಟ್ಟನೇಮಿ
> ಪುಟ್ಟಲೋನ ಚೆದಲು ಪುಟ್ಟದಾ ಗಿಟ್ಟದಾ
> ವಿಶ್ವದಾಭಿರಾಮ ವಿನರ ವೇಮ ॥

ಕುಱಳಿಗೆ ಎರಡೇ ಪಾದ. ಉದಾಹರಣೆ—

> ಕಣ್ಣುಡೈಯರೆನ್ಬವರ್ ಕಱ್ೞೋರ್ ಮುಗತ್ತಿರಂಡು ।
> ಪುಣ್ಣುಡೈಯವರ್ ಕಲ್ಲಾದವರ್ ॥

ಇದು ಎಷ್ಟು ಚಿಕ್ಕದು, ಆದರೂ ಎಷ್ಟು ಅರ್ಥಗರ್ಭಿತ ವಾಗಿದೆ ಎಂಬುದು ಈ ಪದ್ಯದ ಕನ್ನಡಭಾಷಾಂತರವನ್ನು ಓದಿ ದರೆ ತಿಳಿಯುತ್ತದೆ. ರಾವ್‌ಬಹದ್ದೂರ್ ಆರ್. ನರಸಿಂಹಾ ಚಾರ್ಯರವರು 'ನೀತಿಮಂಜರಿ' ಎಂಬ ಹೆಸರಿನಿಂದ ಈ ಗ್ರಂಥದ ಕೆಲವು ಭಾಗಗಳನ್ನು ಭಾಷಾಂತರ ಮಾಡಿದ್ದಾರೆ. ಅವು ಕಂದ ಪದ್ಯಗಳಲ್ಲಿವೆ. ಕಂದ ಪದ್ಯವು ನಮ್ಮ ಕನ್ನಡದಲ್ಲಿ

ಇರುವ ಚಿಕ್ಕ ಛಂದಸ್ಸು. ಆದ್ದರಿಂದ ಕುಱಿಳ್ ಗ್ರಂಥದ ಆ ಚಿಕ್ಕ ಪದ್ಯಗಳನ್ನು ಈ ಚಿಕ್ಕ ಛಂದಸ್ಸಿನಲ್ಲಿ ಅವರು ಕನ್ನಡಿಸಿದ್ದಾರೆ. ಕುಱಿಳಿನ ಛಂದಸ್ಸಿನಲ್ಲಿಯೇ ನೋಡಬೇಕೆಂದರೆ ಮೇಲಿನ ಪದ್ಯವನ್ನು ಹೀಗೆ ಕನ್ನಡಿಸಬಹುದು—

> ಕಣ್ಣಿರುವರೆಂಬವರು ಕಲಿತವರು ; ಮೊಗದೆರಡು ।
> ಹುಣ್ಣಿರುವವರು ಕಲಿಯದವರು ॥

ಇದನ್ನು ನೋಡಿದರೆ ಸರ್ವಜ್ಞನ ಪದ್ಯಗಳ ಮಾದರಿಯಲ್ಲೇ ಇರುವಹಾಗೆ ಕಾಣುತ್ತದೆ. ಈ ಸರಣಿಯೇ ಪ್ರಾಯಶಃ ಮುಂದೆ ಬೆಳೆದು ತ್ರಿಪದಿಯಾಗಿ ಪರಿಣಮಿಸಿರಬಹುದು. ಬರವಣಿಗೆಯಲ್ಲಿ ಸರ್ವಜ್ಞನ ತ್ರಿಪದಿಯು 'ಕುಱಿಳ್' ನಷ್ಟೇ ಸಾರವತ್ತಾದದ್ದು, ಅರ್ಥಗರ್ಭಿತವಾದದ್ದು. ಅರ್ಥವಿಲ್ಲದ "ಮಾತಿನ ಮಾಲೆ" ಯಲ್ಲಿ ಸರ್ವಜ್ಞನಿಗೆ ಸರ್ವಥಾ ಗೌರವವಿಲ್ಲ.—

> ಅರ್ಥವಿಲ್ಲದ ಹಾಡು ವ್ಯರ್ಥ ಸಾಸಿರವಿದ್ದು
> ಅರ್ಥಿಯಿಂ ಕತ್ತೆಯಱಚಿದೊಡದಱಲ್ಲಿ
> ಅರ್ಥವುಂಟೆಂದ ಸರ್ವಜ್ಞ ॥

ಇದರ ಮೊನೆಯು ಸಾಮಾನ್ಯವಾಗಿ ಪದ್ಯದ ಕೊನೆಯಲ್ಲಿರುತ್ತದೆ.

ತ್ರಿಪದಿ ಎಂದರೆ ಈಗ ಸರ್ವಜ್ಞನ ಪದ್ಯಗಳೇ ತಟ್ಟನೆ ಜ್ಞಾಪಕಕ್ಕೆ ಬರುವುದರಿಂದ ತ್ರಿಪದಿಯನ್ನು ಸರ್ವಜ್ಞನೇ ಕಲ್ಪಿಸಿದನೆಂದು ಕೆಲವರು ತಿಳಿದುಕೊಂಡಿದ್ದಾರೆ. ಆದರೆ, ಅವನು ಕಲ್ಪಿಸಿದ್ದಲ್ಲ ಇದು. ಕನ್ನಡ ಛಂದಸ್ಸಿಗೆ ಇದು ಹೊಸದಲ್ಲ ; ಬಹಳ ಕಾಲದಿಂದಲೂ ಇದೆ. ಸರ್ವಜ್ಞನು ಈ ಛಂದಸ್ಸಿನಲ್ಲಿ ಹೆಚ್ಚಾಗಿ ಬರೆದು, ಅದಕ್ಕೆ ಗ್ರಂಥಗೌರವವನ್ನೂ ಪ್ರಸಿದ್ಧಿಯನ್ನೂ

ತಂದನು ಅಷ್ಟೇ. ಸುಮಾರು ಏಳನೆಯ ಶತಮಾನದಲ್ಲಿಯೇ ಇದು ಉಪಯೋಗದಲ್ಲಿದ್ದ ಹಾಗೆ ವಾತಾಪಿಯ ಹತ್ತಿರ ಸಿಕ್ಕಿದ ಒಂದು ಶಾಸನದಿಂದ ಕಂಡುಬರುತ್ತದೆ—

ಸಾಧುಂಗೆ ಸಾಧು ಮಾಧುರ್ಯಂಗೆ ಮಾಧುರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವನೀತನ್ ಪೆಱನಲ್ಲ ||

ಹದಿನೈದನೆಯ ಶತಮಾನದಲ್ಲಿ ಮಹಲಿಂಗ ಎಂಬಾತನು 'ಗುರುಬೋಧಾಮೃತ' ಎಂಬ ಒಂದು ಗ್ರಂಥವನ್ನು ಬರೆದು ಅದರಲ್ಲಿ ತ್ರಿಪದಿಯನ್ನು ಉಪಯೋಗಿಸಿಕೊಂಡಿದ್ದಾನೆ. ಇದು ಅದರಲ್ಲಿನ ಒಂದು ಪದ್ಯ—

ಬಿಂದುಮಾತ್ರದ ಸುಖಕೆ ಮುಂದೆ ಪರ್ವತದಷ್ಟು
ದಂದುಗವ ಹೊತ್ತು ತೊಳತೊಳಲಿ ಭವಭವದೊ
ಳೊಂದಿ ಸಾವವಗೇ ಸುಖವುಂಟೇ ||

ಕಟ್ಟಡ, ಧಾಟಿ, ವಿಷಯ, ಮಾತು, ಎಲ್ಲದರಲ್ಲಿಯೂ ಇದು ಸರ್ವಜ್ಞವಚನದ ಹಾಗೆಯೇ ಇದೆ.

ತ್ರಿಪದಿಯು ಹಾಡುವೃತ್ತ. ಆದ್ದರಿಂದ ಅದು ಕೇಳುವುದಕ್ಕೂ ಹೇಳುವುದಕ್ಕೂ ಹಿತವಾಗಿರುತ್ತದೆ. ಅದರ ಮೂರು ಸಾಲುಗಳಲ್ಲಿ ನಾಲ್ಕು ಸಲ ಪ್ರಾಸ ಬರುತ್ತದೆ. ಪ್ರಾಸವು ಕನ್ನಡಕ್ಕೆ ಎತ್ತಿದ್ದು. ಅದನ್ನು ಕಂಡರೆ ಸರ್ವಜ್ಞನಿಗೆ ತುಂಬ ಅಭಿಮಾನ—

ಪ್ರಾಸವಿಲ್ಲದೆ ಪದವ ತಾಸು ಹಾಡಿದರೇನು?
ಸಾಸವೆಯೊಣ್ಣೆ ಪದಮಾಡಿ ಕಣ್ಣಿಗೆ
ಪೂಸಿಕೊಂಡಂತೆ ಸರ್ವಜ್ಞ ||

# ೨೦. ಕೊನೆಮಾತು

ಸರ್ವಜ್ಞವಚನಗಳಲ್ಲಿ ಸುಮಾರು ಎರಡು ಸಾವಿರದ ವರೆಗೆ ಅಚ್ಚಾಗಿವೆ. ಆದರೆ ಇವೆಲ್ಲವೂ ಒಂದೇ ಸಮನಾಗಿ ರುಚಿಸು ವುದಿಲ್ಲ. ಒಬ್ಬ ಮನುಷ್ಯನ ಬೆಲೆ ಕಟ್ಟಬೇಕಾದರೆ ಅವನು ಮಾಡಿರತಕ್ಕ ಉತ್ತಮವಾದ ಕಾರ್ಯಗಳನ್ನೇ ನೋಡಿ ಬೆಲೆ ಕಟ್ಟಬೇಕು. ಹಾಗೇ ಕಾವ್ಯದಲ್ಲಿಯೂ ಉತ್ತಮವಾದ ಭಾಗವನ್ನು ನೋಡಿಯೇ ಅದರ ಬೆಲೆ ಕಟ್ಟಬೇಕು. ಕೊನೆಗೆ ನಿಲ್ಲತಕ್ಕದ್ದು ಅದೇ ಭಾಗವೇ. ಇಂಥ ಭಾಗವನ್ನು ಆರಿಸುತ್ತ ಹೋದರೆ ಸರ್ವಜ್ಞನ ವಚನಗಳಲ್ಲಿ ಹಲವು ರತ್ನಗಳು ಸಿಕ್ಕು ತ್ತವೆ. ಅವುಗಳನ್ನು ಒಂದು ಸಾರಿ ಓದಿದರೆ ಎಂದಿಗೂ ಮರೆ ಯುವುದಕ್ಕಾಗುವುದಿಲ್ಲ. ಇಂಥವುಗಳಲ್ಲಿ ನೂರಕ್ಕೆ ಮೇಲ್ಪಟ್ಟ ವಚನಗಳನ್ನು ಆರಿಸಿ ಹಿಂದೆ ಸಂದರ್ಭೋಚಿತವಾಗಿ ಉದಾಹರಿ ಸಿದ್ದೇವೆ. ಅವುಗಳನ್ನು ಪಾಠಕರು ಓದಿ ಸಂತೋಷಪಟ್ಟಿದ್ದಾ ರೆಂಬುದು ನಮ್ಮ ನಂಬಿಕೆ.

